# ಪೀಠಿಕೆ.

ವಿಜಯತಾಂ ಭಾರತೀಶೇಶಃ.

ಕರ್ಣಾಟ ಭಾಷೆಯಲ್ಲಿ ಸಂಸ್ಕೃತ ಭಾಷೆಯಲ್ಲಿರುವಂತೆ, ಚಂಪೂ ನಾಟಕಾಲಂಕಾರಾದಿ ಗ್ರಂಥಂಗಳು ವಿಶೇಷವಾಗಿವೆ. ಭಾಷಾಜ್ಞಾನಕ್ಕೆ ವ್ಯಾಕರಣ ಜ್ಞಾನವು ಅತ್ಯವಶ್ಯವಾದುದಲ್ಲವೆ? ನಾಗವರ್ಮಾದಿ ಶಾಸ್ತ್ರಕಾರರ ಸೂತ್ರಂಗಳಿಂದ ಭಾರತ, ಜೈಮಿನಿ ಭಾರತಾದಿ ಷಟ್ಪದೀ ಗ್ರಂಥಂಗಳ ಭಾಷೆಗೆ ಲಕ್ಷ್ಯಲಕ್ಷಣ ಸಮನ್ವಯ ವಾಗದು, ಆದರೆ ಛಂದಶ್ಶಾಸ್ತ್ರದಲ್ಲಿ ಷಟ್ಪದಿಗಳ ಲಕ್ಷಣಮಂ ಬರೆದ ನಾಗವರ್ಮ ನಾವನೊ?

ಈಗ ಪಾಠಶಾಲೆಗಳಲ್ಲಿ (Schools and Colleges.) ಮತ್ತು ಕನ್ನಡ ನಾಡಿ ನೆಲ್ಲೆಡೆಗಳಲ್ಲಿಯೂ ಸಲೆಗೊಂಡಿರುವ ಷಟ್ಪದೀಭಾಷೆ ಅಶುದ್ಧವೆಂಬುದು ನ್ಯಾಯವಲ್ಲವೆಂದೆಣಿಸಿ ಮೆಟ್ರಿಕ್ಯುಲೇಷನ್, ಎಫ್. ಎ. ಬಿ. ಎ. ಮೊದಲಾದ ಪರೀಕ್ಷೆಗಳಿಗೆ ಕನ್ನಡಮನೋದುವರಿಗೆ ವ್ಯಾಕರಣಸಹಾಯವಿಲ್ಲದೆ ಇರುವುದಂ ಸ್ವಾನುಭವದಿಂದ ತಿಳಿದು ಈ ಪುಸ್ತಕಮಂ ಬರೆದು ಅಚ್ಚು ಮಾಡಿಸಲು ಯತ್ನಿಸಿ ನಾನು ದೂರದೇಶವಾಸಿಯಾದುದರಿಂದ ಈ ಕೆಲಸಕ್ಕೆ ಮತ್ತೊಬ್ಬರಂ ನಿಯಮಿಸಿದೆನು. ಆದರೆ ಅವರು ಪ್ರೂಫನ್ನು ಶೋಧಿಸುವಾಗ ಮಾಡಿದುಪೇಕ್ಷೆಯಿಂದ ಕೆಲವು ತಪ್ಪುಗಳಾದುವು. ಪಂಡಿತರು ಗುಣದೋಷ ವಿಷಯದಲ್ಲಿ ಈ ಪುಸ್ತಕಮಂ ಪೂರ್ಣವಾಗಿ ನೋಡಿ ತಮ್ಮಭಿಪ್ರಾಯಮಂ ತಿಳಿಸಿದರೆ ಅವರಿಗೆ ಕೃತಜ್ಞನಾಗಿ ಮುಂದಣ ಮುದ್ರಣದಲ್ಲಿ ಸರಿಮಾಡುವೆನು.

ಮೈಸೂರು.
19/5/1897.

ಇಂತು ವಿದ್ವಜ್ಜನ ವಿಧೇಯನಾದ
ವೈ. ಕೃಷ್ಣಾಚಾರ್ಯಂ.

## ವಿಷಯಸೂಚಿಕೆ.



ಕ. ಭಾ. ಎಂದರೆ ಕರ್ಣಾಟಕಭಾಷಾಭೂಷಣವೆಂದರಿವುದು.

ಶ. ಮ. ,, ,, ಶಬ್ದಮಣಿದರ್ಪಣ ,,

ಶ. ಶಾ. ,, ,, ಶಬ್ದಾನುಶಾಸನ ,,

# ಕರ್ಣಾಟಕ ವ್ಯಾಕರಣಂ.

ಶ್ರೀ ವೇಂಕಟೇಶಾಯ ಮಂಗಳಂ.

ಮಾತಾಪಿತೃಭ್ಯೋ ನಮಃ

---

ಕಂ ॥ ಸಕಲೇಂದ್ರಿಯ ಕಾರ್ಯಂಗಳ ।
ನುಕುತಿಯೊಳುಣ್ಮಿಪಸುರಾಸುರಾರ್ಚಿತಚರಣೇ ॥
ಸುಖದಾಯಿನಿ, ಮತಿವರ್ಧನಿ ।
ಸಕಲ ಜಗನ್ಮಾನ್ಯೆ, ವಾಣಿ, ಕಾಪಾಡೆಮ್ಮಂ ॥ ೧ ॥

ಪಿರಿದುಂ ಚೌಪದಿನುಡಿಗಂ । ವರಕವಿಷಟ್ಪದಿಯ ಭಾಷೆಗಂ ಲಕ್ಕಣಮಂ ॥ ಹರಿಗುರುಗಳ ಕೃಪೆಯಿಂದಂ । ವಿರಚಿಪೆನೆನೆ ಸಂತರೆಂತು ಸಂತಸವೊಂದರ್ ?

## ಸಂಜ್ಞಾಪ್ರಕರಣಂ.

೧. ಕರ್ಣಾಟಕ ವ್ಯಾಕಣವು, ಕನ್ನಡನುಡಿಯ ಶಬ್ದಾರ್ಥಜ್ಞಾನವಮಂ ಪುಟ್ಟುವುದು.

೨. ಅಕ್ಷರಂಗಳು ಅಕಾರದಿಂದೆ ಳಕಾರದವರೆಗಂ ಪ್ರಸಿದ್ಧಂಗಳಾಗಿವೆ (ಅಕ್ಷರವೆಂದರೆ ನಾಶವಿಲ್ಲದುದು. ಮತ್ತು ಅದು ಉಚ್ಚಾರಣೆಗಾಗಿ ರೇಖಾರೂಪವಾಗಿ ನಿರ್ಮಿಸಲ್ಪಟ್ಟಿದೆ).

೩. ಸ್ವರಂಗಳು, ಅಕಾರದಿಂದೌಕಾರ ಪರ್ಯಂತವಾಗಿರುವುವು. (ಸ್ವರವೆಂದರೆ ತಾನಾಗಿ ರಂಜಿಸುವುದು).

೪. ಮನುಷ್ಯರು ಬಾಲ್ಯ, ತಾರುಣ್ಯ, ವಾರ್ಧಕಾವಸ್ಥೆಗಳಂ ಪ್ರೊಂದಿ, ಬಾಲಕರು ತರುಣರು, ವೃದ್ಧರು ಎನಿಪಂತೆ ಅಕಾರ ಮೊದಲಾದ ಸ್ವರಂಗಳು, ಏಕ (೧) ದ್ವಿ (೨) ತ್ರಿ (೩) ಮಾತ್ರಾ ಕಾಲದಲ್ಲುಚ್ಚರಿಸಲ್ಪಡುವುದರಿಂದೆ ಕ್ರಮವಾಗಿ ಹ್ರಸ್ವ ದೀರ್ಘ ಪ್ಲುತ ಸಂಜ್ಞೆಯಂ ಪಡೆವುವು. (ಮಾತ್ರೆಯೆಂದರೆ ಕಾಲವಿಶೇಷವು. ಶ್ಲೋ॥ ಚಾಷಸ್ತು ವದತೆಮಾತ್ರಾಂ ದ್ವಿಮಾತ್ರಾಂ ರ್ವಾತಿವಾಯಸಃ। ಶಿಖೀರೌತಿ ತ್ರಿಮಾತ್ರಂತು ನಕುಲಸ್ತ್ವರ್ಧ ಮಾತ್ರಕಂ॥ ಹ್ರಸ್ವವೆಂದರೆ ಸ್ವಲ್ಪಕಾಲದಲ್ಲುಚ್ಚರಿಸಲ್ಪಡುವುದು. ದೀರ್ಘವೆಂದರೆ ಅಧಿಕಕಾಲದಲ್ಲುಚ್ಚರಿಸಲ್ಪಡುವುದು.) ಏ, ಓ ಗಳ್ಗೆ ಹ್ರಸ್ವವುಂಟು. ಐ, ಔ ಗಳ್ಗೆ ಹ್ರಸ್ವವಿಲ್ಲ.

ಪ್ರಯೋಗಂ॥ ಹ್ರಸ್ವಕ್ಕೆ—ಅ, ಇ, ಉ, ಎ, ಒ
ದೀರ್ಘಕ್ಕೆ—ಆ, ಈ, ಊ, ಏ, ಓ, ಐ, ಔ
ಪ್ಲುತಕ್ಕೆ (೧) ಆ೩, ಈ೩, ಊ೩, ಏ೩, ಓ೩, ಐ೩, ಔ೩.

೫. ಉಳಿದುವು ವ್ಯಂಜನಂಗಳು. ಕಕಾರದಿಂದೆ ಮಕಾರದ ವರೆಗಂ ಐದೈದು ವರ್ಣಂಗಳ್ಗೆ ಒಂದೊಂದು ವರ್ಗವೆಂದು ಸಂಕೇತವು. (ಉಳಿದುವು ಅವರ್ಗೀಯಂಗಳು. ವರ್ಗವೆಂದರೆ ಗುಂಪು) ಡಕಾರಸ್ಥಾನದಲ್ಲಿ ಹುಟ್ಟುವ ಳಕಾರಕ್ಕೆ (ೞ) ರಳವೆಂದುಂ, ರೇಫ

---

(೧) ಹರ್ಷರೋಷಾದಿವಿಷಯಂಗಳಲ್ಲಿ ಸಂಬೋಧನಾ ಪದಾಂತ್ಯಸ್ವರಕ್ಕೆ ವಿಕಲ್ಪವಾಗಿ ಪ್ಲುತವಪ್ಪುದು. ಪ್ರ॥ ರಾಮಾ೩ ಎರಗುವೆಂ—ದುಷ್ಟನೇ ಹೋಗು. ಕೃಷ್ಣಾ೩ ಕಾಯ್ಕೆ.

ವನೊತ್ತಿ ಉಚ್ಚರಿಸಿದರೆ ಹುಟ್ಟುವ ರ ಶಬ್ದಕ್ಕೆ (ಱ) ಱರವೆಂದುಂ ಲಕಾರಸ್ಥಾನದಲ್ಲಿ ಬರುವ ಳಕಾರಕ್ಕೆ ಕ್ಷಳವೆಂದುಂ ದೇಶ್ಯ (ಕನ್ನಡ) ಶಬ್ದದಲ್ಲಿರುವ ಳಕಾರಕ್ಕೆ ಕುಳವೆಂದುಂ ಸಂಕೇತವು. ಸಮಾನ ಸ್ಥಾನೋಚ್ಚಾರಣೆಗಳುಳ್ಳ ಱರಕ್ಕುಂ ರೇಫಕ್ಕುಂ, ಱಳಕ್ಕುಂ ಳಕಾರಕ್ಕುಂ ಭೇದವಿಲ್ಲ.

ಪ್ರಯೋಗಂ ॥ ವರ್ಗೀಯಾಕ್ಷರಂಗಳ್

ಕ, ಖ, ಗ, ಘ, ಙ —ಕವರ್ಗಂ

ಚ, ಛ, ಜ, ಝ, ಞ —ಚವರ್ಗಂ

ಟ, ಠ, ಡ, ಢ, ಣ —ಟವರ್ಗಂ

ತ, ಥ, ದ, ಧ, ನ —ತವರ್ಗಂ

ಪ, ಫ, ಬ, ಭ, ಮ —ಪವರ್ಗಂ

ಅವರ್ಗೀಯಂಗಳ್— ಯ, ರ, ಲ, ವ, ಸ, ಹ, ಳ ಱ, ೞ ಕಕಾರಾದಿ ವ್ಯಂಜನಂಗಳಲ್ಲಿ, ಉಚ್ಚಾರಣಾರ್ಥವಾಗಿ ಅಕಾರವು ಸೇರಿಸಲ್ಪಟ್ಟಿದೆ.

ವ್ಯಂಜನಂಗಳ ಶುದ್ಧವಾದ ರೂಪಂಗಳು= ಕ್, ಚ್, ಟ್, ತ್,...

ಸ್ವರಂಗಳುಂವರ್ಗಪ್ರಥಮ (೧) ತೃತೀಯ (೩) ಪಂಚ (೫)ಮಾಕ್ಷರಂಗಳುಂ ಯ-ರ-ಲ-ವ-ಳ ವರ್ಣಂಗಳುಂ ಅಲ್ಪಪ್ರಾಣಂಗಳು. ಉಳಿದುವು ಮಹಾಪ್ರಾಣಂಗಳು.

೬. ಅಚ್ಚಗನ್ನಡದಲ್ಲಿ, ಋ, ಙ, ಶ, ಷ ವರ್ಣಂಗಳುಂ, ಅವ್ಯಯ ಸಂಬಂಧವಿಲ್ಲದ ವಿಸರ್ಗಮುಂ ಜಿಹ್ವಾ ಮೂಲೀಯೋಪಧ್ಮಾನೀಯಂಗಳುಂ ಇಲ್ಲ. ಎ, ಒ, ಱ, ೞ, ಕುಳವರ್ಣಂಗಳುಂ, ದೇಶ್ಯಾಕ್ಷರಂಗಳುಂ ಸಂಸ್ಕೃತದಲ್ಲಿಲ್ಲ.

೭. ಅನುಸ್ವರ (ಂ) ವಿಸರ್ಗಂ (ಃ) ಗಳು, ಯೋಗವಾಹಂ ಗಳು (ಯೋಗವಾಹವೆಂದರೆ ಮತ್ತೊಂದು ವರ್ಣದ ಸಹಾಯದಿಂ ದುಚ್ಚರಿಸಲ್ಪಡುವುದು.)

೮. ಧಾತುವುಂ, ಪ್ರತ್ಯಯಮುಂ, ಅಲ್ಲದ ಅರ್ಥವುಳ್ಳ ಶಬ್ದ ಸ್ವರೂಪಕ್ಕೆ (ಪ್ರಾತಿಪದಿಕ) ಲಿಂಗವೆಂದು ಸಂಜ್ಞೆ.

ಪ್ರಯೋಗಂ ॥ ಸಿರಿ, ಬೆಳೆ, ಪತಿ, ಅರಸಾಳ್, ಕಲ್ಕುಟಿಗ.

೯. ಕ್ರಿಯೆಯಂ ನುಡಿವ ಪ್ರತ್ಯಯರಹಿತವಾದ ಶಬ್ದಸ್ವರೂ ಪಕ್ಕೆ ಧಾತುವೆಂದುಪೆಸರು.

ಪ್ರಯೋಗಂ ॥ ಕಾ-ಈ-ಪೋ-ಕೋ-ಕುಡು-ಕರೆ-ಪಿಡಿ.

೧೦. ಪ್ರಕೃತಿಗೆ ಪರವಾಗಿ ಬರುವುದು ಪ್ರತ್ಯಯವು. (ಲಿಂ ಗಕ್ಕಂಧಾತುಗಂಪ್ರಕೃತಿಯೆಂದು ಪೆಸರು.)

ಪ್ರಯೋಗಂ॥ ರಾಮಂ= ರಾಮ+ಮ್. ಇಲ್ಲಿ ಮ್, ಪ್ರತ್ಯಯವು. ನೆಲಂ. ಪೇಳಂ= ಪೇಳ್+ಅಮ್. ಇಲ್ಲಿ ಅಮ್ ಪ್ರತ್ಯಯವು. ಕಂಡಂ.

೧೧ * ವಿಭಕ್ತಿ ಪ್ರತ್ಯಯಾಂತವಾದ ಶಬ್ದಕ್ಕೆ ಪದವೆಂದು ಪೆಸರು.

ಪ್ರಯೋಗಂ ॥ ರಾಮಂ—ಭೀಮಂ-ಕಳೆಗೆ-ಮಳೆಯು-

ಪಿಡಿವಂ-ಕಿವಂ-ನುಗ್ಗಿದಂ—ಪೇಳ್ದಳ್.

೧೨. ಸಂಯುಕ್ತಾಕ್ಷರವೆಂದರೆ, ವ್ಯಂಜನಂಗಳೆಡೆವಿಡದೆ ಕೂ ಡಿರುವುದು.

ಪ್ರಯೋಗಂ॥ ಕ್+ಷ್+ಅ= ಕ್ಷ, ಜ್ಞ, ವ್ರ. ಶ್ರೀ ....

---

* ವಿಭಕ್ತಿಪ್ರತ್ಯಯಂಗಳು ಸುಬಂತ ಪ್ರಕರಣದಲ್ಲಿಯುಂ ತಿಙಂತ ಪ್ರಕ ರಣದಲ್ಲಿಯುಂ ಹೇಳಲ್ಪಟ್ಟವೆ.

(ಉಳಿದ ಸಂಜ್ಞೆಗಳಾಯಾ ಪ್ರಕರಣಂಗಳಲ್ಲಿ ಹೇಳಲ್ಪಡುವುವು.)

| ವರ್ಣಸ್ಥಾನಂಗಳ್. | ಪುಟ್ಟುವವರ್ಣಂಗಳ್. |
|---|---|
| (ಕೊರಲ್)ಕಂಠಸ್ಥಾನದಲ್ಲಿ... | ಅ-ಕವರ್ಗ-ವಿಸರ್ಗ-ಹಕಾರಂಗಳ್. |
| (ದವಡೆ) ತಾಲು ,, ... | ಇ-ಚವರ್ಗ-ಯ, ಶವರ್ಣಂಗಳ್. |
| (ಅಂಗುಳ್) ಮೂರ್ಧ ,, ... | ಋ-ಟವರ್ಗ-ರ, ಷವರ್ಣಂಗಳ್. |
| (ಹಲ್) ದಂತ ,, ... | ೡ, ತವರ್ಗ- ಲ, ಸವರ್ಣಂಗಳ್. |
| (ತುಟಿ) ಓಷ್ಠ ,, ... | ಉ, ಪವರ್ಗೋಪಧ್ಮಾನೀಯಂಗಳ್.* |
| (ಮೂಗು) ನಾಸಿಕಾ ,, ... | ಂ-ಙ-ಞ-ಣ-ನ-ಮ ವರ್ಣಂಗಳ್. |
| ಕಂಠ ತಾಲು ,, ... | ಎ ಐ ವರ್ಣಂಗಳ್. |
| ಕಂಠೋಷ್ಠ ,, ... | ಒ ಔ ವರ್ಣಂಗಳ್. |
| ದಂತೋಷ್ಠ ,, ... | ವವರ್ಣಂ. |
| (ನಾಲಿಗೆಯಬುಡ) ಜಿಹ್ವಾಮೂಲ ,, ... | * ಜಿಹ್ವಾಮೂಲೀಯಂ. |

ಹ್ರಸ್ವ ಸ್ವರಸ್ಥಾನದಲ್ಲಿಯೇ ದೀರ್ಘ ಪ್ಲುತ ಸ್ವರಂಗಳುಂ ಪುಟ್ಟುವುವು.)

ಸ್ವರಂಗಳುಂ, ಯ, ವ, ಲವರ್ಣಂಗಳುಂ, ಅನುನಾಸಿಕ (ನಾಸಿಕಾಸಹಾಯದಿಂ ಪುಟ್ಟುವುದು) ವರ್ಣಂಗಳಪ್ಪುವು.

ಸಂಜ್ಞಾಪ್ರಕರಣಂ ಮುಗಿದುದು.

---

* ಕಪವರ್ಣಂಗಳ ಹಿಂದಿರುವ ವಿಸರ್ಗಕ್ಕೆ ಕ್ರಮವಾಗಿ ಜಿಹ್ವಾಮೂಲೀಯೋಪಧ್ಮಾನೀಯಂಗಳೆಂದುಹೆಸರು. ಪ್ರ॥ ಚಿಃಕಷ್ಟವಾಯ್ತು-ಉಃಪೆಂದಂ.

## ಸಂಧಿಪ್ರಕರಣಂ.

೧೩ ಸಂಧಿಯೆಂದರೆ ವರ್ಣಂಗಳೆಡೆವಿಡದೆ ಕೂಡುವುದು. ಮೇಣ್ (ಅಥವಾ) ಲೋಪಾಗಮಾದೇಶಾದಿಗಳಿಂದೆ ವರ್ಣವಿಕಾರ ವಪ್ಪುದು. ಲೋಪವೆಂದರೆ ಸಂಧಿಕಾಲದಲ್ಲಿರ್ದ ವರ್ಣವು ಸಂಧಿಯಾದಮೇಲೆ ಕಾಣದಿರುವುದು.

ಪ್ರಯೋಗಂ ॥ ಬಂದು + ಇರ್ದಂ= ಬಂದ್ + ಇರ್ದಂ-ಇಲ್ಲಿದ ಕಾರದ ಮುಂದಣ ಉಕಾರಕ್ಕೆ ಲೋಪವಾಗಿ ಬಂದಿರ್ದಂ ಎಂದು ಆಗುವದು.

ಆಗಮವೆಂದರೆ ಸಂಧಿಕಾಲದಲ್ಲಿರ್ದ ವರ್ಣಕ್ಕೆ ಪಿಂದಾದೊಡಂ ಮುಂದಾದೊಡಂ ಮಿತ್ರನಂತೆ ಹೊಸವರ್ಣವು ಬರುವುದು.

ಪ್ರಯೋಗಂ ॥ ಸಿರಿ + ಅಮ್= ಸಿರಿ + ಯ್ + ಅಮ್-ಇಲ್ಲಿಯ್ ವರ್ಣವು ಮೊದಲಿರ್ದ ವರ್ಣವಂ ಕಿಡಿಸದೆ ಮಿತ್ರನಂತೆ ಬಂದು ಸಿರಿಯುಂ ಎಂದಾಯ್ತು.

ಆದೇಶವೆಂದರೆ ಸಂಧಿಕಾಲದಲ್ಲಿರ್ದ ವರ್ಣದ ಸ್ಥಾನದಲ್ಲಿ ಶತ್ರುವಿನಂತೆ ಹೊಸವರ್ಣವು ಬಪ್ಪುದು.

ಪ್ರಯೋಗಂ॥ ಮರ + ಕಾಲ್ = ಮರಗಾಲ್—ಇಲ್ಲಿ ಮೊದಲಿರ್ದ ಕವರ್ಣಸ್ಥಾನದಲ್ಲಿ ಶತ್ರುವಿನಂತೆ ಗಕಾರವು ಬಂದು ಮರಗಾಲ್ ಎಂದಾಯ್ತು.

೧೪ ಸಂಧಿಕಾರ್ಯವು * ನಿತ್ಯವೆಂದುಂ ಅನಿತ್ಯವೆಂದುಂ ಇರ್ತೆರನಾಗಿಪ್ಪುದು.

ಪ್ರಯೋಗಂ ॥ ನಿತ್ಯಕ್ಕೆ—ಹರಿ + ಅಮ್ = ಹರಿಯುಂ-ಗುರುವೆ-ಅರಸಾಳ್—ಮುಂಜೂರ್.

---

* ಪದದಲ್ಲಿಯುಂ-ಸಮಾಸದಲ್ಲಿಯುಂನಿತ್ಯಂ. ವಾಕ್ಯದಲ್ಲಿ ಅನಿತ್ಯಂ.

ಅನಿತ್ಯಕ್ಕೆ—{ರಾಮಂಕೆಪಂಚವಟಿಗೆಎಳ್ತಂದಂ—ಇಲ್ಲಿ ಸಂಧಿಯಿಲ್ಲ.
ರಾಮನೀಪಂಚವಟಿಗೆಳ್ತಂದಂ—ಇಲ್ಲಿ ಸಂಧಿಯಾಯ್ತು.

೧೫ ಸ್ವರಸಂಧಿ, ಪ್ರಕೃತಿಭಾವಸಂಧಿ-ವ್ಯಂಜನಸಂಧಿ ಎಂದು ಸಂಧಿ—ತ್ರಿವಿಧವಾಗಿಪ್ಪುದು.

ಪ್ರಕೃತಿಭಾವವೆಂದರೆ ಲೋಪಾಗಮಾದಿಗಳು ಬಾರದೆ ಮೊದಲಿರ್ದಂತೆ ಇರುವುದು.

## ಸ್ವರಲೋಪಸಂಧಿ.

೧೬ ಹ್ರಸ್ವಸ್ವರಕ್ಕೆ ಪರದಲ್ಲಿ ಸ್ವರವಿರ್ದೊಡೆ ಲೋಕಪ್ರಸಿದ್ಧಿಯಂತೆ ಲೋಪವಾದ ಬಳಿಕರ್ಥವಾದೊಡೆ ಪೂರ್ವಸ್ವರಕ್ಕೆ ಲೋಪವಪ್ಪುದು. ಆದರೆ ಅಕಾರಾಂತವಲ್ಲದ ಸಂಸ್ಕೃತಶಬ್ದಕ್ಕೆ ಪರದಲ್ಲಿ ಸ್ವರವಿರ್ದೊಡೆ ಪೂರ್ವವರ್ಣಕ್ಕೆ ಲೋಪವಿಲ್ಲ.

ಪ್ರಯೋಗಂ || ಲೋಪಕ್ಕೆ—ಅರ್ಚ + ಇಸು = ಅರ್ಚ್ + ಇಸು = ಅರ್ಚಿಸು ಇಲ್ಲಿ ಇಕಾರಕ್ಕೆ ಪೂರ್ವಸ್ವರವಾದ ಅಕಾರ (ಚಕಾರದಮುಂದಣ ವರ್ಣ) ಕ್ಕೆ ಲೋಪವಾಯ್ತು. ಭಾವಿಸು-ಅಲ್ಲಲ್ಲಿ- ನೋಡಿರ್ದಂ-ಕಂಡಿಲ್ಲ—ಬಂದುಂಟು-ಸುಮ್ಮನಿರ್ದಂ-ಮೆಲ್ಲನೇಳ್ದಳ್ ಮೊದಲಾದುವು. ಲೋಪವಿಲ್ಲದುದಕ್ಕೆ—ಸತಿ + ಅ = ಸತಿಯ. ಗುರುವೀತಂ ಮೊದಲಾದುವು.

## ಆಗಮಸಂಧಿ.

೧೭ ಅ, ಆ, ಇ, ಈ, ಎ, ಏ, ಐ ವರ್ಣಂಗಳ್ಗೆ ಪರದಲ್ಲಿ ಸ್ವರವಿರ್ದೊಡೆ ಪೂರ್ವಸ್ವರಕ್ಕೆ ಲೋಪವಾಗದ ಪಕ್ಷದಲ್ಲಿ ಆ ಸ್ವರಂಗಳ ನಡುವೆ ಯಕಾರಾಗಮವಪ್ಪುದು.

ಪ್ರಯೋಗಂ || ಪೂರ + ಇಸು = ಪೂರ + ಯ್ + ಇಸು = ಪೂರಯಿಸು. ಆತನುಮೆ. ಕಾಯುತ್ತೆ. ಮಾಯೊಳ್. ಹರಿಯುವಂ. ಗಿರಿಯುಂ

ಗಣಿಯಲ್ಲಿ. ಗಿಳಿಯುಂ. ಶ್ರೀಯೀಕೆ. ಹ್ರೀಯಿಲ್ಲ. ಈಯುತೆ. ವೀಯಲ್. ಕೆರೆಯಿದು. ಕೆಳೆಯುಣ್ಬ. ತೇಯಲ್. ಮೇಯುತೆ. ಬೇಯಲ್. ರೈಯೊದಗಿದುದು. ದೈಯೆಂದಂ.

೧೮ ಕರ್ಣಾಟ ಶಬ್ದಾಂತವಾದ ಓಕಾರಕ್ಕೆ ಪರದಲ್ಲಿ ಸ್ವರವಿರ್ದೊಡೆ ಯಕಾರಾಗಮವಪ್ಪುದು:

ಪ್ರಯೋಗಂ ‖ ನೋ + ಅದೆ = ನೋಯದೆ ತೋಯಲ್.

೧೯ ಉಳಿದಸ್ವರಂ (ಉ. ಊ. ಋ. ೠ. ಒ. ಓ. ಔ.) ಗಳ್ಗೆ ಪರದಲ್ಲಿ ಸ್ವರವಿರ್ದೊಡೆ, ಪೂರ್ವಸ್ವರಕ್ಕೆ ಲೋಪವಾಗದ ಪಕ್ಷದಲ್ಲಿ ಆ ಸ್ವರಂಗಳನಡುವೆ ವಕಾರಾಗಮವಪ್ಪುದು.

ಪ್ರಯೋಗಂ ‖ ವಾಯು + ಅಮ್ = ವಾಯು + ವ್ + ಅಮ್ = ವಾಯುವಂ. ಧೇನುವಂ. ಗಿಡುವಂ. ಕರುವಿದು. ಭ್ರೂವಿದು. ಭೂವೋಳ್-ಪೂವೊಳ್ಳಿತು. ಧಾತೃವೀತಂ. ಧಾತೃವೇ. ಗ್ವಾವಿಂ. ಒವೆಂದಂ-ಗೋವಿದು. ಗೋವೀದುದು. ನೌವಿದು. ಗ್ಲೌವದು.

೨೦ ಆಕಾರಕ್ಕೆ ಉ, ಊ, ಒ, ಓ, ವರ್ಣಂಗಳ್ ಪರದಲ್ಲಿರ್ದೊಡೆ ನಡುವೆ ವಕಾರಾಗಮವಪ್ಪುದು.

ಪ್ರಯೋಗಂ ‖ ಅ + ಉದಕಂ = ಆ + ವ್ + ಉದಕಂ = ಆವುದಕಂ. ಆವುತ್ಪಲಂ, ಆವುಂಗುರಂ, ಆವುಡೆಗಳ್, ಆವೂರ್ವಶಿ, ಆವೂರುಗಳ್, ಆವೂರ್, ಆವೊಲೆ, ಆವೊಂಟೆ, ಆವೋಷಧಿ, ಆ ವೋಂಕಾರಂ.

ಆದೇಶಸಂಧಿ.

೨೧ ದೀರ್ಘಾಂತವಾದ ಸರ್ವನಾಮಶಬ್ದಕ್ಕೆ ಪರವಾದ ಹ್ರಸ್ವವಾದ ಋಕಾರಕ್ಕೆ ರು ಶಬ್ದಾದೇಶವಪ್ಪುದು.

ಪ್ರಯೋಗಂ ‖ ಆ + ಋಷಿ = ಆರುಷಿ. ಈರುತು ಎಲ್ಲಾರುತ್ವಿಜರ್

ಪ್ರಕೃತಿಭಾವಸಂಧಿ.

೨೨ ಉಳಿದ ಶಬ್ದಕ್ಕೆ ಪರದಲ್ಲಿ ಋ ವರ್ಣವಿರ್ದೊಡೆ ಪ್ರ

ಕೃತಿಭಾವಮಪ್ಪುದು.

ಪ್ರಯೋಗಂ ‖ ಕಳೆದ + ಋತು = ಕಳೆದಋತು, ಋಷಿಋಣಂ, ಗುರುಋತ್ವಿಜಂ. ಪಿತೃಋಣಿ.

೨೩ ವಿಕೃತಿಯಿಂದೆ ಅಕಾರಾಂತವಾದ ಅನುಕರಣಕ್ಕೆ ಪರದಲ್ಲಿ ಸ್ವರವಿರ್ದೊಡೆ ಪ್ರಕೃತಿಭಾವಮಪ್ಪುದು.

ಪ್ರಯೋಗಂ ‖ ನಸತ್ಯಾತ್ಪರವೋಧರ್ಮ + ಎಂದಂಪಾರ್ಥಂಗೆಧರ್ಮಜಂ = ನಸತ್ಯಾತ್ಪರವೋಧರ್ಮಎಂದಂ ಪಾರ್ಥಂಗೆಧರ್ಮಜಂ.

೨೪ ವಿಕೃತಿಯಿಂದೆ ಅಕಾರಾಂತವಾದ, ಪೊಸ. ಪೊರ. ಒಳ ಎಳ. ಪಳ. ಎಂಬ ಶಬ್ದಂಗಳ್ಗೆ ಪರದಲ್ಲಿ ಸ್ವರವಿರ್ದೊಡೆ ಪ್ರಕೃತಿಭಾವ ಮಪ್ಪುದು.

ಪ್ರಯೋಗಂ ‖ ಪೊಸ + ಆನೆ = ಪೊಸ ಆನೆ, ಪೊರಅಂಗಳಂ ಒಳಒಕ್ಕಲ್. ಒಳಅಂಕಣಂ. ಎಳ ಅಡಕೆ. ಪಳ ಅರಸುಗಳ್.

೨೫ ನಿಪಾತಕ್ಕೆ (೧) ಪರದಲ್ಲಿ ಸ್ವರವಿರ್ದೊಡೆ ಪ್ರಕೃತಿಭಾವಮಪ್ಪುದು.

ಪ್ರಯೋಗಂ ‖ ಅಹೋ + ಇಂದ್ರನೆಳ್ತಂದಂ = ಅಹೋ ಇಂದ್ರನೆಳ್ತಂದಂ ನಿನಗಕ್ಕೆಮ ಅಜ್ಜ ಗರ್ಭನಾಯುಂ ಶ್ರೀಯುಂ.

೨೬ ಆಕಾರಕ್ಕೆ (೨) ಪ್ರತ್ಯಯ ಸಂಬಂಧವಿಲ್ಲದ ಅವರ್ಣವುಂ, ಐ, ಔ ವರ್ಣಂಗಳುಂ ಪರವಾದೊಡೆ ಪ್ರಕೃತಿಭಾವ ಮಪ್ಪುದು.

---

(೧) ಕ, ಭಾ, ಏ, ಓ, ವರ್ಣಾಂತವಾದ ನಿಪಾತಕ್ಕೆ ಪರದಲ್ಲಿ ಸ್ವರವಿರೆ ಪ್ರಕೃತಿಭಾವಂ. ಶ, ಮ, ಎ ವರ್ಣಾಂತವಾದ ನಿಪಾತಕ್ಕಂ ಪರದಲ್ಲಿ ಸ್ವರವಿರೆ ಪ್ರಕೃತಿಭಾವಂ. (೨) ಶ, ಶಾ, ಆಕಾರಕ್ಕೆ ಅ ಆ, ಕಾರಂಗಳ್ ಪರವಾಗೆ ಪ್ರಕೃತಿಭಾವಂ.

ಪ್ರಯೋಗಂ ॥ ಆ + ಅರಸಂ = ಆ ಅರಸಂ. ಆ ಅಂಜೆ. ಆ ಐಶ್ವರ್ಯಂ. ಆ ಐಲಬಿಲಂ. ಆ ಔನ್ನತ್ಯಂ. ಆ ಔಡುಗಳ್.

೨೭ ಪ್ಲುತಕ್ಕೆ ಪರದಲ್ಲಿ ಸ್ವರವಿರ್ದೊಡೆ ಪ್ರಕೃತಿಭಾವಮಪ್ಪುದು.

ಪ್ರಯೋಗಂ ॥ ಕೃಷ್ಣಾ³ ಎರಗಿದೆಂ। ಶ್ರೀ³ ಇತ್ತನೋಡಾ.

೨೮ ಸ್ವರಾಂತನಾದ ಸಂಖ್ಯಾವಾಚಕಂಗಳ್ಗಂ ಅಕಾರಾಂತನಾದ ವಿಶೇಷಣ ಪದಂಗಳ್ಗಂ ಪರದಲ್ಲಿ ವ್ಯಂಜನವಿರ್ದೊಡೆ ಪ್ರಕೃತಿಭಾವಮಪ್ಪುದು.

ಪ್ರಯೋಗಂ ॥ ಒಂದು ಕಯ್. ಎರಡು ಕಾಲ್ಗಳ್. ತೂಗುವ ತೊಟ್ಟಿಲ್. ಆಡುವಪಟಂ.

೨೯ ಸ್ವರಾಂತನಾದ ಅನುಕರಣ ಶಬ್ದಕ್ಕೆ ಪರದಲ್ಲಿ ಸ್ವರ ವಿರ್ದೊಡೆ ವಿಕಲ್ಪವಾಗಿ ಪ್ರಕೃತಿ ಭಾವವಪ್ಪುದು.

ಪ್ರಯೋಗಂ ॥ ಪಟಪಟ + ಎನುತೆ = ಪಟಪಟಎನುತೆ. ಪಟಪಟಯೆನುತೆ. ಚಿಟಿಚಿಟಿ ಎನುತಂ. ಚಿಟಿಚಿಟಿಯೆನುತಂ.

೩೦ ಸ್ವರಾಂತನಾದ ಪದ್ಯಾರ್ಧಕ್ಕೆ ಪರದಲ್ಲಿ ಸ್ವರವಿರ್ದೊಡೆ ವಿಕಲ್ಪವಾಗಿ ಪ್ರಕೃತಿಭಾವಮಪ್ಪುದು.

ಪ್ರಯೋಗಂ ॥ ವಿಸಂಧಿಗೆ = ಸತ್ಯವ್ರತ ಭೂಪತಿಯನ। ಪತ್ಯಕಳತ್ರಾದಿ ಪೆರಱುಪ್ರೊರೆವೈ ಹರಿಯೇ ॥ ಅತ್ಯಂತದುಃಖಭಾಜನ। ಗತ್ಯಂತರ ಶೂನ್ಯರಾದ ತಮ್ಮಂ ಕಾಯ್ವೈ ॥ ಸಂಧಿಗೆ = ಹರಿಯೆ ॥ ಯತ್ಯಂತ.

೩೧ ಗಡ ಮೊದಲಾದ ಶಬ್ದಂಗಳ್ಗೆ ಪರದಲ್ಲಿ ಸ್ವರವಿರ್ದೊಡೆ ವಿಕಲ್ಪವಾಗಿ ಪ್ರಕೃತಿಭಾವಮಪ್ಪುದು.

(ಗಡ ಮೊದಲಾದ ಶಬ್ದಂಗಳ ವ್ಯಯಪ್ರಕರಣದಲ್ಲಿ ಹೇಳಲ್ಪಟ್ಟವೆ.)

ಪ್ರಯೋಗಂ॥ ತಾಂಗಡ + ಅರ್ಜುನಂ = ತಾಂಗಡಅರ್ಜುನಂ—ತಾಂಗಡರ್ಜುನಂ ಸುಮ್ಮನೆ ಇರ್ದಂ—ಸುಮ್ಮನಿರ್ದಂ.

೩೨ ಕರೆಧಾತುವಿಂಗೆ "ಅಲ್" ಪ್ರತ್ಯಯಮುಂ ಅಕಾರಾಂತವಾದ ಇರ್‌ಧಾತುವಿಂಗೆ "ಅದೆ" ಪ್ರತ್ಯಯಮುಂ ಪರವಾದೊಡೆ ವಿಕಲ್ಪವಾಗಿ ಪ್ರಕೃತಿಭಾವಮಪ್ಪುದು.

ಪ್ರಯೋಗಂ॥ ಕರೆ + ಅಲ್ = ಕರೆಅಲ್, ಕರೆಯಲ್-ಇರಅದೆ, ಇರದೆ

## ವ್ಯಂಜನಸಂಧಿ.

೩೩ ಉತ್ತರಪದಾದಿಯಾದ ಕ, ತ, ಪ, ವರ್ಣಂಗಳ್ಗೆ ಕ್ರಮವಾಗಿ (೧) ಗ, ದ, ಬ, ವರ್ಣಾದೇಶವಪ್ಪುದು. (ಸೂ ೩೭)

ಪ್ರಯೋಗಂ॥ ಪಳ + ಕನ್ನಡಂ = ಪಳಗನ್ನಡಂ. ಎಳಗರು. ಕೆಂದಳಿರ್. ಉಡಿದೊವಲ್. ತಣ್ಬೆಳಲ್. ಕಿಳ್ಬರಿ.

೩೪ ಆದೇಶವಾಗಿ ಬಂದ ರೇಫ (೨) ಱಕಾರಂಗಳ್ಗೆ ಪರವಾದ ಕ, ತ, ಪ, ವರ್ಣಂಗಳ್ಗೆ ತೃತೀಯವರ್ಣಾದೇಶವಿಲ್ಲ.

ಪ್ರಯೋಗಂ॥ ಒರ್ + ಕಯ್ = ಒರ್ಕಯ್. ಮೂರ್ಕೊರಲ್. ಕಾಱ್ಕಿಚ್ಚು. ಕೋಱ್ಕಟ್ಟು. ಇರ್ತಲೆ. ಮೂರ್ತಡಿ. ಎರೞ್ತಡಿಗಳ್. ಕಾಱ್ತುರು. ಒರ್ಪಡಿ. ಮೂರ್ಪಡೆ ಕಾಱ್ಪುರಂ. ಎರೞ್ಪಕ್ಕಂಗಳ್.

೩೫ ತಲೆ + ಕಟ್ಟು = ತಲೆಕಟ್ಟು. ಬೆಸೆಕೋಲ್. ಒಳಕೆಯ್. ಮೊಳಕಯ್. ಪೊರಕಯ್. ಒಳಕೋಟೆ. ಪೊರ

---

(೧) ಶ. ಮ. ಬಹುಳಂ (೨) ಕ. ಭಾ. ಆದಿಷ್ಟರೇಫಕ್ಕೆ ಪರವಾದ ಕ. ತ. ಪ. ವರ್ಣಂಗಳ್ಗೆ ತೃತೀಯತ್ವವಿಲ್ಲ.

ಕೋಟೆ. ಪ್ರೊರಕಟ್ಟು. ಬರಿಕಾಲ್. ಒಳತೋಟಂ. ಕಯ್ಪುರೆ. ಮುಕ್ಕುಪ್ಪೆ. ಪುತ್ತಡಿ. ಮುಪ್ಪುರಿ. ಮೊದಲಾದ ಶಬ್ದಂಗಳಲ್ಲಿ ಉತ್ತರಪದಾದಿ ವರ್ಣಂಗಳಾದ ಕ, ತ, ಪ, ವರ್ಣಂಗಳ್ಗೆ, ತೃತೀಯ ವರ್ಣಾದೇಶಂಬಾರದು.

೩೬ ಣ, ಕಾರಕ್ಕೆ ಪರವಾದ ನ, ಕಾರಕ್ಕೆಣಕಾರದೇಶ ಮಪ್ಪುದು.

ಪ್ರಯೋಗಂ॥ ತಣ್ + ನೆಳಲ್ = ತಣ್ಣೆಳಲ್, ಪೆಣ್ಣೊಂದಪಳ್.

೩೭ ಸ್ವರಕ್ಕುಂ (೧) ಆದೇಶವಾಗಿ ಬಾರದ ವ್ಯಂಜನಕ್ಕುಂ ಪರವಾದ, ಉತ್ತರಪದಾದಿ ವರ್ಣಂಗಳಾದ, ಪ, ಬ, ಮ, ವರ್ಣಂಗಳ್ಗೆ ಬಹುಳವಾಗಿ * ವಕಾರಾದೇಶವಪ್ಪುದು.

ಪ್ರಯೋಗಂ॥ ಸ್ವರಕ್ಕೆ॥ ಎಳದು + ಪೆರೆ = ಎಳವೆರೆ. ಪೊಸವೆಸರ್. ಕಡುವೆಳ್ಪು. ಮೂವಣ್ಣಂ. ಮರವಣೆ. ನೆಲವನೆ. ವ್ಯಂಜನಕ್ಕೆ॥ ಎಳನೀರ್ + ಪೊನಲ್ = ಎಳನೀರ್ವೊನಲ್. ನೀರ್ವಾವು. ಕಲ್ವಾಳೆ. ಬೇರ್ವೆರಸಿ. ಪುಲ್ವನೆ-ಮೆಲ್ವಾತು.

ವೆತ್ವವಿಲ್ಲದುದರ್ಕೆ॥ ಪೂ + ಪುಂಬು = ಪೂಪುಂಬು. ಕಯ್ಪುರೆ. ಮುದುಬೇಡಂ. ಬಾಂಬಟ್ಟೆ. ಪೊಸಮನೆ ಬಲ್ಮುಗುಳ್. ಪಡಾವ

---

(೧) ಶ, ಮ-ಶ, ಶಾ—ಪವರ್ಗಾಕ್ಷರಂಗಳ್ಗೆ ವೆತ್ವಮಕ್ಕುಂ. ಶ, ಶಾ-ಅನಾದಿಷ್ಟವಾದ ವ್ಯಂಜನಕ್ಕೆ ಪರವಾದ ಪವರ್ಗಕ್ಕೆ ಬಹುಳವಾಗಿ ವೆತ್ವಂ ಶ, ಮ-ವಾಕ್ಯದಲ್ಲಿ ಬಹುಳವಾಗಿ ವೆತ್ವಮಕ್ಕುಂ. ಪ್ರಯೋಗಂ॥ ಕೆಲಸಕ್ಕೆ ಪೊರ್ದ ದಿವಿಜಾಂಗನೆಯರ್.

* ಬಹುಳವೆಂದರೆ ಮಹಾಕವಿಪ್ರಯೋಗಾನುಸಾರವು. ಶ್ಲೋ॥ ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾಕ್ವಚಿದನ್ಯದೇವ॥ ವಿಧೇರ್ವಿಧಾನಂ ಬಹುಧಾಸಮೀಕ್ಷ್ಯ ಚತುರ್ವಿಧಂ ಬಾಹುಳಕಂವದಂತಿ॥

ಯವವಾದ ಮಕಾರಕ್ಕೆ ವಿಕಲ್ಪವಾಗಿ ವಕಾರಾದೇಶವಪ್ಪುದು- ಪ್ರ॥ ಆಮುಂ, ಆವುಂ, ಎಮೆ ಎವೆ.

೩೪ ವ್ಯಂಜನಕ್ಕೆ ಪರವಾದ, ಉತ್ತರಪದಾದಿ ವರ್ಣವಾದ ಸಂಖ್ಯಾವಾಚಿಯ ಸಕಾರಕ್ಕೆ ಛ ಕಾರಾದೇಶವಪ್ಪುದು.

ಪ್ರಯೋಗಂ॥ ಎಣ್ಬ+ಸಾಸಿರಂ= ಎಣ್ +ಸಾಸಿರಂ = ಎಣ್ಛಾಸಿರಂ. ಮೂಛ್ಛಾಸಿರಂ. ಆಛ್ಛಾಸಿರಂ. ನೂಛ್ಛಾಸಿರಂ.

೩೯ ವ್ಯಂಜನಕ್ಕೆ ಪರವಾದ, ಉತ್ತರಪದಾದಿಯಾದ ಸಕಾರಕ್ಕೆ ಬಹುಳವಾಗಿ ಚಕಾರಾದೇಶವುಂ, ಕೆಲವೆಡೆಗಳಲ್ಲಿ (೧) ಜಕಾರಾದೇಶವುಂ ಬರ್ಪುವು.

ಪ್ರಯೋಗಂ॥ ಚಕಾರಕ್ಕೆ—ಒಂದು+ಸೆರಂಗು = ಒಲ್ + ಸೆರಂಗು= ಒರ್ಚೆರಂಗು. ಇರ್ಚೆರೆ. ನಣ್ಚರಂ ನುಣ್ಸರಂ। ಕಣ್ಸೊಲ್. ಕಳ್ಸರಿ. ಜಕಾರಕ್ಕೆ—ಮುಂಜೂರ್. ಪೊಂಜುರಿಗೆ ತೊಗುಂಜೊಡರ್.

೪೦ ಯ, ಲ, ಳ (೨) ವರ್ಣಂಗಳ್ಗೆ ಪರವಾದ ಸಕಾರಕ್ಕೆ ಚಕಾರ ಜಕಾರಾ ದೇಶಂಗಳಿಲ್ಲ.

ಪ್ರಯೋಗಂ॥ ಮೆಯ್ +ಸೊಬಗು= ಮೆಯ್ಸೊಬಗು. ಬಾಯ್ಸವಿ ಮೆಲ್ಸೋನೆ. ಕಲ್ಸಕ್ಕರೆ, ಕಿಳ್ಸೊಲ್, ಎರಳ್ಸಾಸಿರಂ.

೪೧ ಪತ್ತು ಶಬ್ದಕ್ಕೆ ಆದೇಶವಾಗಿ ಬರುವ ಪರ್ಬು ಶಬ್ದಕ್ಕೆ ಪರವಾದ ಸಂಖ್ಯಾವಾಚಿಯ ಸಕಾರಕ್ಕೆ ಜಕಾರಾದೇಶ ವಪ್ಪುದು.

---

(೧) ಶ. ಶಾ- ಬಹುಳವಾಗಿ ಚಕಾರಾದೇಶವಪ್ಪುದು. ಶ, ಮ, ಸ್ವರಕ್ಕೆ ಪರವಾದ ಸಕಾರಕ್ಕಂಕೆಲವೆಡೆಗಳಲ್ಲಿ ಜತ್ವಮಕ್ಕುಂ; ಪ್ರಯೋಗಂ॥ ತುಡುಜೊಡರ್.

(೨) ಶ, ಶಾ-ಳವರ್ಣಕ್ಕೆ ಪರವಾದ ಸಕಾರಕ್ಕೆ ಬಹುಳವಾಗಿ ಚತ್ವಮಕ್ಕುಂ, ಪ್ರಯೋಗಂ—ಬೆಳ್ಸರಿ-ಬೆಳ್ಚರಿ.

ಪ್ರಯೋಗಂ॥ ಪತ್ತು +ಸಾಸಿರಂ= ಪರ್ಬು +ಸಾಸಿರಂ = ಪರ್ಚಾಸಿರಂ-

## ದ್ವಿತ್ವಸಂಧಿ.

೪೨ ಆದೇಶವಾಗಿ ಬಂದ ಮು ಶಬ್ದಕ್ಕೆ ಪರವಾದ ವ್ಯಂಜನಕ್ಕೆ ದ್ವಿಭಾವವಪ್ಪುದು.

ಪ್ರಯೋಗಂ॥ ಮೊದಲು+ ಕೊಡೆ= ಮು + ಕೊಡೆ= ಮುಕ್ಕೊಡೆ ಮುಗ್ಗಡಿ. ಮುಚ್ಚೇರಿ. ಮುಪ್ಪೊಳಲ್.

೪೩ ಏಕ (೧)ಸ್ವರವುಳ್ಳ, ಅವ್ಯಯವಲ್ಲದ, ಹ್ರಸ್ವಸ್ವರಕ್ಕೆ ಪರವಾದ, ಶಬ್ದಂಗಳ ನ, ಣ, ಲ, ಯ, ಳ, ವರ್ಣಂಗಳ್ಗೆ ಪರದಲ್ಲಿ ಸ್ವರವಿರ್ದೊಡೆ ಪೂರ್ವ ವ್ಯಂಜನಕ್ಕೆ ದ್ವಿಭಾವವಪ್ಪುದು.

ಪ್ರಯೋಗಂ॥ಎನ್ +ಅಮ್=ಎನ್ನಂ. ಪೊನ್ನಿದು ಕಣ್ಣಂ. ಪೆಣ್ಣವಳ್. ಪುಲ್ಲಂ. ನೆಲ್ಲಿದು. ಮೆಯ್ಯೊಳ್ ನೆಯ್ಯೊಳ್ಳಿತು. ಮುಳ್ಳಂ. ಎಳ್ಳೆಣ್ಣೆ.

೪೪ ಉಯ್, ನೆಯ್, ಸುಯ್, ಬಯ್, ಧಾತುಗಳ್ಗೆ ಪರದಲ್ಲಿ ಸ್ವರವಿರ್ದೊಡಂ ಏಕಸ್ವರವುಳ್ಳ, ಹ್ರಸ್ವಸ್ವರಕ್ಕೆ ಪರವಾದ, ನ, ಣ, ಲ, ಯ, ಳ, ವರ್ಣಾಂತಂಗಳಾದ ಧಾತುಗಳ್ಗೆ "ಅದೆ" ಎಂಬ ಪ್ರತ್ಯಯಂಪರವಾದೊಡಂ ಪೂರ್ವವ್ಯಂಜನಕ್ಕೆ ದ್ವಿಭಾವವಪ್ಪುದು.

ಪ್ರಯೋಗಂ ॥ ಉಯ್ಯಲ್-ಉಯ್ಯುತ್ತೆ. ನೆಯ್ಯಲ್-ನೆಯ್ಯುತಂ. ಸುಯ್ಯಲ್-ಸುಯ್ಯುತ್ತುಂ. ಬಯ್ಯಲ್–ಬಯ್ಯುತಂ. ಎನ್ನದೆ. ತಿನ್ನದೆ. ಪಣ್ಣದೆ. ಉಣ್ಣದೆ. ಮೆಲ್ಲದೆ. ಕೊಲ್ಲದೆ. ಕೊಯ್ಯದೆ. ಪೊಯ್ಯದೆ. ಕೊಳ್ಳದೆ. ತಳ್ಳದೆ.

---

(೧) ಶ, ಶಾ-ತ. ಟವರ್ಗಂಗಳ್ಗಂ ದ್ವಿಭಾವವಪ್ಪುದು. ಪ್ರಯೋಗಂ॥ ಕಿತ್ತಡಿ. ಕಿತ್ತಿಳೆ. ನಟ್ಟಡವಿ ನಟ್ಟಿರುಳ್.

೪೫ ವ್ಯಂಜನಾಂತ ಶಬ್ದಕ್ಕೆ ಪರದಲ್ಲಿ ಉಗಾಗಮಂ ಬಂದೊಡೆ ಪೂರ್ವ ವ್ಯಂಜನಕ್ಕೆ ದ್ವಿಭಾವಮಪ್ಪುದು.

ಪ್ರಯೋಗಂ॥ ವಾಕ್ + ಉ = ವಾಕ್ಕು. ಮರುತ್ತು. ಅಪ್ಪು ವಯುಸ್ಸು.

೪೬ ಷಟ್ಪದಿಯಲ್ಲಿ ಹ್ರಸ್ವಾದಿಯಾದ ರೇಫ-ಲ-ಳಕಾರಾಂತಂಗಳಾದ ಶಬ್ದಂಗಳ್ಗೆ ಪರದಲ್ಲಿ ವ್ಯಂಜನವಿರ್ದೊಡೆ ಪೂರ್ವವ್ಯಂಜನಕ್ಕೆ ಬಹುಳವಾಗಿ ಲೋಪವಪ್ಪುದು. ಲೋಪವಾದಪಕ್ಷದಲ್ಲಿ ಪರವಾದ ವ್ಯಂಜನಕ್ಕೆ ದ್ವಿಭಾವಮಪ್ಪುದು.

ಪ್ರಯೋಗಂ ॥ ಕರಿದು + ಕಳ್ತಲೆ = ಕರ್ಗಳ್ತಲೆ-ಕಗ್ಗಳ್ತಲೆ (ಇಲ್ಲಿ ಕರ್ ಶಬ್ದದರೇಫಕ್ಕೆ ಲೋಪವಾಯ್ತು. ಅದರಿಂದೆ ರೇಫಕ್ಕೆ ಪರವಾದ ಗಕಾರಕ್ಕೆ ದ್ವಿತ್ವವಾಯ್ತು.) ಒರ್ಬಂ-ಒಬ್ಬಂ ಕರ್ಬಕ್ಕಿ-ಕಬ್ಬಕ್ಕಿ, ಇಮ್ಮಡಿ-ಇಮ್ಮಡಿ. ತಿರ್ದು-ತಿದ್ದು. ಉರ್ದು-ಉದ್ದು—ಮೆಲ್ದು—ಮೆದ್ದು-ಗೆಲ್ದಂ-ಗೆದ್ದಂ—ಕಳ್ದು—ಕದ್ದು. ಕಿಳ್ಬರಿ-ಕಿಬ್ಬರಿ.

೪೭ * ಏಕಸ್ವರವುಳ್ಳ ಹ್ರಸ್ವಸ್ವರಕ್ಕೆ ಪರವಾದ ನ-ಣ-ಲ-ಯ-ಳ—ವರ್ಣಾಂತಂಗಳಾದ ಧಾತುಗಳ್ಗೆ ಪರದಲ್ಲಿ ಸ್ವರವಿರ್ದೊಡೆ ಪೂರ್ವವ್ಯಂಜನಕ್ಕೆ ವಿಕಲ್ಪವಾಗಿ ದ್ವಿಭಾವಮಪ್ಪುದು.

---

* ಪ್ರತಿಷೇಧವಿಷಯದಲ್ಲಿ ಬಹುಳವಾಗಿ ದ್ವಿತ್ವವಪ್ಪುದು. ಕೊಳಂ, ಕೊಳ್ಳಂ, ಮೆಲ್ಲಂ, ಮೆಲಂ.

ಶ ಮ-ಧಾತುಗಳ್ಗೆ ಅಲ್‌ಪ್ರತ್ಯಯಂಪರವಾದೊಡೆ ದ್ವಿಭಾವವಿಲ್ಲ ಶ ಶಾ-ನ, ಣ, ಲ, ಯ, ಳ, ತ, ಟ-ವರ್ಣಂಗಳ್ಗೆ ಪರದಲ್ಲಿ ಸ್ವರಾದಿಯಾದ ಕೃತ್ಪ್ರತ್ಯಯವಿರ್ದೊಡೆ-ದ್ವಿಭಾವವಿಲ್ಲ॥ ಯಾಂತಧಾತುವಿಂಗೆ-ಅಲ್ – ಪರವಾದೊಡೆ ಕಿಜ್‌ವಿಷಯದಲ್ಲಿ ದ್ವಿತ್ವನಿತ್ಯಂ ಪ್ರಯೋಗಂ ॥ ಬಯ್ಯಲ್ಬೇಡ-ಪೊಯ್ಯಲ್‌ಬೇಡ

ಪ್ರಯೋಗಂ॥ ಎನ್ನಲ್-ಎನಲ್-ಪಣ್ಣಲ್-ಪಣಲ್, ಕೊಲ್ಲಲ್-ಕೊಲಲ್-ಪೊಯ್ಯುತೆ-ಪೊಯುತೆ. ಕೊಳ್ಳಲ್-ಕೊಳಲ್.

೪೮ ಆರಯ್ (೧) ಧಾತುವಿನ ಯಕಾರಕ್ಕೆ ಪರದಲ್ಲಿ ಸ್ವರವಿರ್ದೊಡೆ ವಿಕಲ್ಪವಾಗಿ ದ್ವಿತ್ವವಪ್ಪುದು.

ಪ್ರಯೋಗಂ॥ಆರಯ್ಯಲ್—ಆರಯಲ್. ಆರಯ್ಯುತೆ—ಆರಯುತೆ.

೪೯ ಅಳ್ + ಉಳ್-ಕಳ್ ಧಾತುಗಳ ಳಕಾರಕ್ಕೆ ಪರದಲ್ಲಿ ಸ್ವರವಿರ್ದೊಡೆ ದ್ವಿರ್ಭಾವವಿಲ್ಲ

ಪ್ರಯೋಗಂ ॥ ಅಳಂ-ಅಳರ್. ಉಳಂ—ಉಳದೆ ಕಳಂ—ಕಳಲ್.

ದ್ವಿತ್ವಶೈಥಿಲ್ಯಂಗಳ್.

೫೦ ಕೃತ್ತದ್ಧಿತ ಸಮಾಸಂಗಳಲ್ಲಿ ಲಘ್ವಾದಿಯುಂ-ಲಘೂಪಾತ್ತ್ಯಮುಂ ಆದ ಅನೇಕಸ್ವರವುಳ್ಳ ವ್ಯಂಜನಾಂತ ಶಬ್ದಕ್ಕೆ ಪರವಾದ ಗ-ದ-ವ-ಬ-ಕಾರಂಗಳು ಶೈಥಿಲ್ಯ * ಮಂಪಡೆವುವು.

ಪ್ರಯೋಗಂ॥ ಕೃತ್ತಿಂಗೆ= ಉಸಿರ್ + ದಂ= ಉಸಿರ್ದಂ-ಉಸಿರ್ದಂಗೆ-ಪೊಣರ್ದಂ-ಪೊಣರ್ದಂಗೆ. ಪೊಗಳ್ದನಂ-ಪೊಗಳ್ವಾತಂ- ಪೊಗಳ್ವಲ್. ತದ್ಧಿತಕ್ಕೆ= ಉಸಿರ್ಗಂ-ಬಿಮರ್ಗಂ-ಕದಿರ್ವಳಂ. ಸಮಾಸಕ್ಕೆ= ಕಾಳಿರ್ಗಾಳಿ ಕೊನರ್ಗೆಂಪು- ಅಲರ್ದಾಣಂ- ತಳಿರ್ದೊಂಗಲ್--ತಳಿರ್ವಗೆ- ಪೊಗರ್ವಟ್ಟೆ- ತಳಿರ್ಜೊಂಪಂ-ಬೆಳ್ದೊನ್ನಂ

---

(೧) ಶ, ಶಾ-ಗೆಯ್ ಧಾತುವಿಂಗೆ ಸ್ವರಂಪರದೊಳಿರ್ದೊಡೆ ವಿಕಲ್ಪವಾಗಿ ದ್ವಿತ್ವಮಪ್ಪುದು ನ-ಣ-ಲ-ಯ-ಳ-ತ-ಟ-ವರ್ಣಂಗಳ್ಗೆ ಇಸು ಪ್ರತ್ಯಯಂ ಪರನಾದೊಡೆ ದ್ವಿತ್ವವಿಲ್ಲ ಪ್ರಯೋಗಂ ॥ ತಿನಿಸಿದಂ—ಉಣಿಸಿದಂ.

* ಶೈಥಿಲ್ಯವೆಂದರೆ, ಸಂಯುಕ್ತಾಕ್ಷರದಂತೆ ಉಚ್ಚರಿಸಲ್ಪಡದೆ ಇರುವುದು-. ಲಘ್ವಕ್ಷರವೆಂದರೆ- ದೀರ್ಘಾನುಸ್ವಾರವಿಸರ್ಗಾಂತಂಗಳಲ್ಲದ ಮತ್ತಂ ಸಂಯುಕ್ತಾಕ್ಷರದ ಹಿಂದಿನಕ್ಷರವಲ್ಲದ ವರ್ಣವು ॥ ಪ್ರ-ಅ-ಕ॥ ಶ, ಮ-ಶ, ಶಾ-ಲಕಾರಕ್ಕೆ ಪರವಾದ ವ್ಯಂಜನಕ್ಕೆ ಶೈಥಿಲ್ಯವಿಲ್ಲ.

೫೧ ಬರ್ದಿಲಂ ಮೊದಲಾದ ಶಬ್ದಂಗಳಲ್ಲಿ ರೇಫಕ್ಕೆ ಪರದಲ್ಲಿರ್ಪ ವ್ಯಂಜನಂಗಳ್ ಶೈಥಿಲ್ಯಂಗಳು.

ಪ್ರಯೋಗಂ ‖ ಬರ್ದಿಲಂ- ಗರ್ದುಗು- ಅದಿಮೂರ್ತಿ- ಕರ್ದುಕು- ಬರ್ದುಕು-ಅಮರ್ದು-ಅಮರ್ದುವಳ್ಳಿ-ಎರ್ದೆ.

೫೨ ಲಘ್ವಾದಿಯುಂ, ಲಘೂಪಾಂತ್ಯಮುಂ ಆದ ಅನೇಕ ಸ್ವರವುಳ್ಳ ವ್ಯಂಜನಾಂತಶಬ್ದಕ್ಕೆ ಪರವಾದ, ಗೆ-ಗಳ್-ಗುಂ-ದ-ದಪ, ಕಾರಂಗಳ ಆದಿ ವ್ಯಂಜನಕ್ಕೆ ವಿಕಲ್ಪವಾಗಿ ಶೈಥಿಲ್ಯಮಪ್ಪುದು.

ಪ್ರಯೋಗಂ ‖ ಕೊನರ್ಗೆ-ಕೊನರ್ಗ್ಗೆ. ತಳಿರ್ಗಳ್-ತಳಿರ್ಗ್ಗಳ್. ನೆಗಳ್ಗುಂ-ನೆಗಳ್ಗ್ಗುಂ. ಬೆದರ್ಗುಂ-ಬೆದರ್ಗ್ಗುಂ. ಉಸಿರ್ದರ್-ಉಸಿರ್ದ್ದರ್ ನೆಗಳ್ದಪಂ-ನೆಗಳ್ದ್ದಪಂ.

೫೩ ಕಾದಲರ್ ಶಬ್ದಕ್ಕೆ ಪರವಾದ, ಗೆ-ಗಳ್, ಪ್ರತ್ಯಯಂಗಳ-ಗ-ಕಾರಕ್ಕೆ ವಿಕಲ್ಪವಾಗಿ ಶೈಥಿಲ್ಯಮಪ್ಪುದು.

ಪ್ರಯೋಗಂ‖ ಕಾದಲರ್ಗೆ-ಕಾದಲರ್ಗ್ಗೆ. ಕಾದಲರ್ಗಳ್-ಕಾದಲರ್ಗ್ಗಳ್.

೫೪ ಸ್ವರಾಂತ ಶಬ್ದಕ್ಕೆ ಪರವಾದ, ರೇಫಸಂಯುಕ್ತವಾದ ವ್ಯಂಜನಕ್ಕೆ ವಿಕಲ್ಪವಾಗಿ ಶೈಥಿಲ್ಯಮಪ್ಪುದು.

ಪ್ರಯೋಗಂ‖ ಪ್ರಣಯದೆ ತ್ರಿಪಥೆಗೆ ನಡೆದಂ-ಪ್ರಣಯದೆ ತ್ತ್ರಿಪಥೆಗೆ ನಡೆದಂ. ಇದೆ ಪ್ರಿಯಮಾಯ್ತು-ಇದೆ ಪ್ಪ್ರಿಯಮಾಯ್ತು.

೫೫ ಶಬ್ದಾಂತವಾದ ಮಕಾರಕ್ಕೆ ಪರದಲ್ಲಿ ಸ್ವರವಿರ್ದೊಡೆ-ಬಹುಳವಾಗಿ ಮಕಾರಕ್ಕೆ ನಕಾರಾದೇಶಮಪ್ಪುದು.

ಪ್ರಯೋಗಂ‖ ಅಣ್ಣಮ್ + ಇವಂ = ಅಣ್ಣನಿವಂ-ರಾಮನೇಳ್ದಂ. ಅಕ್ಕನಿರ್ದಳ್ ಇಲ್ಲಿ ನಿತ್ಯವಾಗಿ ನಕಾರಾದೇಶವಾಯ್ತು. ವೃಕ್ಷಮಿದು-ಪಾಷಮಿದು-ಇಲ್ಲಿ ನಕಾರಾದೇಶವಿಲ್ಲ.

೫೬ ಮ, ನ, ಕಾರಂಗಳ್ಗೆ ಪರದಲ್ಲಿ ವ್ಯಂಜನವಿರ್ದೊಡಂ-ಇಲ್ಲದೊಡಂ-ಆ ಮ, ನ, ಕಾರಂಗಳ್ಗೆ ಅನುಸ್ವಾರಾದೇಶಮಪ್ಪುದು.

ಪ್ರಯೋಗಂ ॥ ವ್ಯಂಜನಪರವಾದುದಕ್ಕೆ-ತಾಪಸಮ್ + ಸುಖಿಯಲ್ತೆ. = ತಾಪಸಂಸುಖಿಯಲ್ತೆಅವಂ ವಿಲಕ್ಷಣಂ. ಏನ್ + ಯೋಚಿಪ್ಪುದು= ಏಂ ಯೋಚಿಪ್ಪುದು. ಇವಂ ಲಾಕ್ಷಣಿಕಂ. ವ್ಯಂಜನ ಪರಮಾಗದುದರ್ಕೆ ॥ ನೀಮ್= ನೀಂ. ತಾಂ. ಏನ್= ಏಂ. ಆಂ.

೫೭ ಮ, ನ, ಕಾರಂಗಳ್ಗೆ ಪರದಲ್ಲಿ ವರ್ಗಾಕ್ಷರವಿರ್ದೊಡೆ ಪೂರ್ವ ವ್ಯಂಜನಕ್ಕೆ ವಿಕಲ್ಪವಾಗಿ ಪರವಾದ ವರ್ಗದ ಪಂಚಮಾಕ್ಷರಾದೇಶಮಪ್ಪುದು.

ಪ್ರಯೋಗಂ॥ ನೀಮ್ + ಕುಶಲಂ = ನಿಙ್ಕಶಲಂ, ನೀಂಕುಶಲಂ. ಅವಞ್ಚಲಂ—ಅವಂಚಲಂ. ಏಣ್ ತೋರ್ಪುದು ಏಂ ತೋರ್ಪುದು. ಏಮ್ಮಾಡಿದಯ್= ಏಂ ಮಾಡಿದಯ್.

೫೮ ಅವ್ಯಯವಲ್ಲದ, ವಿಸರ್ಗಾಂತವಾದ ಅನುಕರಣ ಶಬ್ದಕ್ಕೆ ಪರದಲ್ಲಿ ಸ್ವರವಿರ್ದೊಡೆ ವಿಸರ್ಗಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ॥ ಬಲವಾನಿಂದ್ರಿಯಗ್ರಾಮ ಎನುತ್ತೆ, ಬಲವಾನಿಂದ್ರಿಯಗ್ರಾಮಃ ಎನ.ತೆ ಕೇನಾರ್ಥೀಕೋದರಿದ್ರ ಎನುತೆ. ಕೇನಾರ್ಥೀಕೋದದಿದ್ರಃ ಎನುತೆ.

ಇಂತು ಸಂಧಿಪ್ರಕರಣಂ ಮುಗಿದುದು.

## * ಸುಬಂತ ಪ್ರಕರಣಂ.

೪೯ ಕೆಲವು ಶಬ್ದಂಗಳ್ ಪ್ರಾತಿಪದಿಕ ಮೂಲಂಗಳಾಗಿಯುಂ ಉಳಿದುವು ಧಾತುಮೂಲಂಗಳಾಗಿಯುಂ ಇರ್ಪುವು.

೫೦ ಪುಲ್ಲಿಂಗ-ಸ್ತ್ರೀಲಿಂಗ-ನಪುಂಸಕಲಿಂಗ- ಪುಂಸ್ತ್ರೀಲಿಂಗ-ಪುನ್ನಪುಂಸಕಲಿಂಗ-ಸ್ತ್ರೀನಪುಂಸಲಿಂಗ-ತ್ರಿಲಿಂಗಾವ್ಯಯ ಲಿಂಗಂಗಳೆಂದು, ಲಿಂಗವು. ಅಷ್ಟ (ಎಣ್ಬ)ವಿಧವಾಗಿರ್ಪುದು.

೫೧ ಪುರುಷ ವಾಚಕಶಬ್ದಂಗಳ್ ಪುಲ್ಲಿಂಗಂಗಳ್.-ಸ್ತ್ರೀವಾಚಕ ಶಬ್ದಂಗಳ್ ಸ್ತ್ರೀಲಿಂಗಂಗಳ್.

ಪ್ರಯೋಗಂ॥ ಪುಲ್ಲಿಂಗಕ್ಕೆ—ಹರಿಅರಸು. ಮುದುಪಾರ್ವಂ. ಲಂಚವಣಿಗಂ. ಸ್ತ್ರೀಲಿಂಗಕ್ಕೆ—ಸಿರಿಅರಸಿ. ತಂಗಿ. ವಧು ತಾಯ್.

೫೨ ಉಳಿದುವು ನಪುಂಸಕಲಿಂಗಂಗಳ್.

ಪ್ರಯೋಗಂ॥ ಗಿರಿ ಮನೆ-ಬೀದಿ-ಜಲಂ.

೫೩ ಸಂಸ್ಕೃತದಲ್ಲಿ ನಪುಂಸಕಲಿಂಗಂಗಳಾದ ಕಳತ್ರಂ ಮೊದಲಾದ ಶಬ್ದಂಗಳು ನಪುಂಸಕಲಿಂಗಂಗಳಪ್ಪುವು.

ಪ್ರಯೋಗಂ॥ ಕಳತ್ರಂ—ಅಪತ್ಯಂ—ತೋಕಂ. ಶಿಸು ಮೊದಲಾದುವು.

೫೪ ಭೂತ-ಪ್ರೇತ-ಪಿಶಾಚ, ಮೊದಲಾದ ಶಬ್ದಂಗಳು ನಪುಂಸಕಲಿಂಗಂಗಳಪ್ಪುವು.

೫೫ ಕೂಸು-ಪಸುಳೆ (೧) ಶಬ್ದಂಗಳುಂ, ಜನ-ಪ್ರಜೆ ಈ ಶಬ್ದಂಗಳೇಕವಚನದಲ್ಲಿಯುಂ ನಪುಂಸಕ ಲಿಂಗಂಗಳಪ್ಪುವು.

---

* ಸುಪ್- ಎಂದರೆ ಪ್ರಥಮಾದಿ ವಿಭಕ್ತಿಪ್ರತ್ಯಯಂಗಳ್ ಕೃದಂತತದ್ಧಿತಾಂತ ಸಮಾಸ(ನಾಮ)ಂಗಳ್. ಪ್ರಾತಿಪದಿಕಂಗಳೆನಿಪುವು (೧) ಶಿ, ಶಾಮಗವು.

ಆದೊಡೆ (೧) ಕು, ಸು, ದುರ್, ಶಬ್ದಂಗಳ್ಗೆ ಪರನಾದ ಜನ ಶಬ್ದವು ನಪುಂಸಕಲಿಂಗವಾಗದು.

ಪ್ರಯೋಗಂ ॥ ಕೂಸು ಸಣ್ಣದು (೨) ಜನಂ ಬಂದುದು. ಪ್ರಜೆ ಬಳೆದುದು. ಕುಜನನೀತಂ.

೬೬ (೩) ಸೂರ್ಯಾದಿಗ್ರಹವಾಚಕಶಬ್ದಂಗಳ್ ಪುನ್ನಪುಂಸಕಲಿಂಗಂಗಳಪ್ಪುವು.

ಪ್ರಯೋಗಂ ॥ ರವಿಬಂದಂ-ರವಿಬಂದುದು. ಚಂದ್ರಂ ಬೆಳಗಿದುದು ಚಂದ್ರಂಬೆಳಗಿದಂ ಮೊದಲಾದುವು.

೬೭ ವಸಂತ, ಮಲಯಾನಿಲ, ವಾಚಕಶಬ್ದಂಗಳ್ ಪುನ್ನಪುಂಸಕಲಿಂಗಂಗಳಪ್ಪುವು.

ಪ್ರಯೋಗಂ ॥ ವಸಂತಂಬಂದಂ-ವಸಂತಂಬಂದುದು. ಮಲಯಾನಿಲಂ ಕೀಡಿದಂ. ಮಲಯಾನಿಲಂ ಕೀಡಿದುದು. ಚೈತ್ರಾನಿಲನೆಸಗಿದಂ. ಚೈತ್ರಾನಿಲನೆಸಗಿದುದು.

೬೮ (೪) ದೇವತಾವಾಚಕವಾದ ಶಬ್ದಂಗಳ್ ಸ್ತ್ರೀನಪುಂಸಕಲಿಂಗಂಗಳಪ್ಪುವು.

ಪ್ರಯೋಗಂ ॥ ಸರಸ್ವತಿ ಯೊಲಿದಳ್. ಸರಸ್ವತಿ ಯೊಲಿದುದು. ಸಿರಿ ಸ್ಥಿರೆಯಲ್ತು—ಸಿರಿ ಸ್ಥಿರಮಲ್ತು.

---

(೧) ಶ, ಶಾ ಕುಲಸ್ತ್ರೀವಾಚಕವಾದ ಸಜ್ಜನ ಶಬ್ದಂ ನಪುಂಸಕಲಿಂಗವಪ್ಪುದು. (೨) ಶ ಮ ಮಹಾಜನಂ (೩) ಪೊಲ-ನೆಲ- ಗರುಡ-ಬಸವ ಮೊದಲಾದ ಶಬ್ದಂಗಳ್ ಪುನ್ನಪುಂಸಕಲಿಂಗಂಗಳ್. (೪) ಶ, ಶಾ ದೇವತೆ ಮೊದಲಾದ ಶಬ್ದಂಗಳ್ ಸ್ತ್ರೀ ನಪುಂಸಕ ಲಿಂಗಂಗಳ್.

೬೯ ಪೆಣ್, ಚೌಡಿ, ಡಾಕಿನಿ, (೧) ಮಾರಿ ಮೊದಲಾದ ಶಬ್ದಂಗಳ್ ಸ್ತ್ರೀನಪುಂಸಕಲಿಂಗಂಗಳಪ್ಪುವು.

ಪ್ರಯೋಗಂ॥ ಈಪೆಣ್-ಜಾಣೆ, ಈಪೆಣ್ಣೊಳ್ಳಿತು. ಚೌಡಿ ಕುಣಿದುದು.

೭೦ ತೊಳ್ತು-ಮಗು- ಶಬ್ದಂಗಳ್ ತ್ರಿಲಿಂಗಂಗಳಪ್ಪುವು.

ಪ್ರಯೋಗಂ॥ ಇವಂತೊಳ್ತು-(೨) ಇವಳ್‌ತೊಳ್ತು-ಇದುತೊಳ್ತು.

೭೧ ಎನ್-ನನ್-ನಿನ್ ತನ್ ಶಬ್ದಂಗಳ್ ತ್ರಿಲಿಂಗಂಗಳಪ್ಪುವು.

ಪ್ರಯೋಗಂ॥ ಆಂಬಲ್ಲಿದಂ, ಆಂಜಾಣೆ, ಆಂತಾವರೆ, ನಾಂಪಾರ್ವಂ, ನಾಂ ಪಾರ್ವಿತಿ, ನಾಂ ಮಾರುತಂ, ನೀಂ ಚದುರಂ, ನೀಂ ಚದುರೆ, ನೀಂ ಹಸುಳೆ, ತಾಂ ಚಪಲಂ, ತಾಂ ಚಪಲೆ, ತಾಂ ಪಿರಿದು.

೭೨ ವಿಶೇಷಣ (ಕೃದಂತ- ತದ್ಧಿತಾಂತ-ಸಂಖ್ಯಾ-ಸರ್ವನಾಮ-ಗುಣ-ಪ್ರಕಾರ- ಪರಿಮಾಣವಾಚಕ-ಬಹುವ್ರೀಹಿ) ಶಬ್ದಂಗಳ್ ವಿಶೇಷ್ಯ (ವಿಶೇಷ್ಯಪದದ) ಲಿಂಗಂಗಳಪ್ಪುವು.

ಪ್ರಯೋಗಂ ॥ ಕೊಂಡಂ ಕೃಷ್ಣಂ, ಕೊಂಡಳ್ ಕಾಂತೆ, ಕೊಂಡುದು ಮಿಗಂ। ಕೊಲ್ಲಟಿಗನೀತಂ, ಕೊಲ್ಲಟಿಗಿತಿಯಿಾಕೆ। ಒರ್ಬಂಮಗಂ, ಒರ್ವಳ್ ಮಗಳ್, ಒಂದು ಮಗು। ಅವಂ ಕಾವಂ, ಅವಳ್ ಇಚ್ಚೆಗಾರ್ತಿ, ಅದು ಪಕ್ಕಿ। ಒಳ್ಳಿದಂ ರಾಮಂ, ಒಳ್ಳಿದಳ್‌ಸೀತೆ, ಒಳ್ಳಿತು ಆಕಳ್। ಕುಡುವಿಲ್ಲಂಮಯಣಂ. ಮೆಲ್ಲಿರ್ದೆಯಾಳ್‌ಕಾಂತೆ. ಪೊಳ್ಳಿರ್ದೆಮಿಗಂ.

೭೩ ದ್ವಂದ್ವ-ತತ್ಪುರುಷ (೩) ಸಮಾಸಂಗಳ್ ಪರವಲ್ಲಿಂಗಂ (ಪರಪದದಲಿಂಗಂ) ಗಳಪ್ಪುವು.

---

(೧) ಶ, ಮ ತೊಳ್ತು ಶಬ್ದವು ಪುಂಸ್ತ್ರೀಲಿಂಗ ವಪ್ಪುದು. ಪ್ರಯೋಗಂ॥ ಇವಂ ದೇವರತೊಳ್ತು.

(೨) ಶ, ಶಾ ಶಾಕಿನಿ ಮೊದಲಾದ ಶಬ್ದಂಗಳ್ ನಪುಂಸಕಲಿಂಗಂಗಳುಂ ತೊಳ್ತು, ಪೆಂಡತಿಶಬ್ದಂಗಳ್ ಸ್ತ್ರೀನಪುಂಸಕಲಿಂಗಂಗಳುಂ ಅಪ್ಪುವು.

(೩) ಶ, ಶಾ ಅಂಶಿಸಮಾಸವು ಪರವಲ್ಲಿಂಗವಪ್ಪುದು। ಪ್ರ. ಮುಂಗಾಲ್

ಪ್ರಯೋಗಂ॥ ಗಂದಿಗವಾಲೆಗಾರ್ತಿವಿಗಂಗಳ್ ಇಲ್ಲಿ ಪರಪದ ವಾದ "ವಿಗ" ಶಬ್ದವು ನಪುಂಸಕಲಿಂಗವಾದುದರಿಂದೆ ದ್ವಂದ್ವಸಮಾಸ ವಾದಗಂದಿಗ ಮಾಲೆಗಾರ್ತಿ ವಿಗ ಶಬ್ದಮುಂ ನಪುಂಸಕಲಿಂಗವಾದುದು.

(ಅವ್ಯಯಲಿಂಗವು ಅವ್ಯಯಪ್ರಕರಣದಲ್ಲಿ ಹೇಳಲ್ಪಡುವುದು.)

ಪುಲ್ಲಿಂಗ ರೂಪಂಗಳ್.

೭೮ * ಅದು, ಇದು, ಉದು, ಶಬ್ದಂಗಳ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ವ ಶಬ್ದಾದೇಶವಪ್ಪುದು.

ಪ್ರಯೋಗಂ॥ ಅದು + ವಂ = ಅವಂ. ಇವಂ. ಉವಂ.

೭೯ (೧) ಆವುದು ಶಬ್ದದ ಆದಿಸ್ವರಕ್ಕೆ ಪರದಲ್ಲಿರ್ಪ ವರ್ಣಂಗಳ್ಗೆ ವಕಾರಾದೇಶವಪ್ಪುದು.

ಪ್ರಯೋಗಂ॥ ಅವುದು + ವಂ = ಆವಂ. ಆವನಂ-

೮೦ ಪೆರತು-ಪೆರದು ಶಬ್ದಂಗಳ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ಲೋಪವಪ್ಪುದು. ಪ್ರಯೋಗಂ॥ ಪೆರಂ-ಪೆರನಂ

೮೧ ಒಂದು ಶಬ್ದಕ್ಕೆ ಒರ್ವ-ಒರ಼್ ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಒರ್ವಂ-ಒರ಼್ಂ.

೮೨ ಗುಣವಾಚಕದ ದುಶಬ್ದಕ್ಕೆ ಅಕಾರಾದೇಶವಪ್ಪುದು.

ಪ್ರಯೋಗಂ॥ ಬಿಳಿದು + ಅ + ಮ್ = ಬಿಳಿಯುಂ. ಇನಿಯಂ.

---

* ಅದು-ಇದು-ಉದು ಶಬ್ದಂಗಳ್ಗೆ ಪುಲ್ಲಿಂಗದಲ್ಲಿ ಕ್ರಮವಾಗಿ ಆತ-ಈತ-ಊತ ಎಂಬಾದೇಶಂಗಳುಂ ಸ್ತ್ರೀಲಿಂಗದಲ್ಲಿ ಆಕೆ-ಈಕೆ-ಊಕೆ ಎಂಬಾದೇಶಂಗಳುಂ ಅಪ್ಪುವು. (೧) ಶ, ಮ-ಶ, ಶಾ, ಪುಂಸ್ತ್ರೀಲಿಂಗಂಗಳಲ್ಲಿ ಏಕವಚನದಲ್ಲಿ ಆವುದು ಶಬ್ದಕ್ಕೆ ಆರ್ವ್ ಎಂಬಾದೇಶಮುಂ ಕೃದಂತ ಶಬ್ದಾಂತವಾದ ಅಕಾರಕ್ಕೆ ಒರ್ ಎಂಬಾದೇಶವುಂ ವಿಕಲ್ಪವಾಗಿ ಬರ್ಪುವು. ಪ್ರ॥ ಕೃದಂತಕ್ಕೆ ಮಾಡಿದೊಂ, ಕಾಡಿದೊಂ.

೭೯ ಎಳಡು ಪಳಡು ಶಬ್ದಂಗಳ ಪೂರ್ವೋತ್ತರ ಸ್ವರಂಗಳಿಂ ಕೂಡಿದ ಅಂತ್ಯ ವ್ಯಂಜನಕ್ಕೆ ಎಯ, ಎಂಬಾದೇಶವಪ್ಪುದು.

ಪ್ರಯೋಗಂ॥ ಎಳಡು + ಎಯಂ = ಎಳೆಯಂ ಪಳೆಯಂ.

೮೦ ಗುಣವಾಚಕದ ತು ಶಬ್ದಕ್ಕೆ ದಶಬ್ದಾದೇಶವಪ್ಪುದು,

ಪ್ರಯೋಗಂ॥ ಒಳ್ಳಿತು + ದಂ = ಒಳ್ಳಿದಂ, ಮೆಲ್ಲಿದಂ.

೮೧ ಪೊಸತು-ಪೊಸದು ಶಬ್ದಂಗಳ ಪೂರ್ವೋತ್ತರಸ್ವರಂಗಳಿಂ ಕೂಡಿದ ಅಂತ್ಯವ್ಯಂಜನಕ್ಕೆ 'ಅಂಬ' ಎಂಬಾದೇಶವಪ್ಪುದು.

ಪ್ರಯೋಗಂ॥ ಪೊಸಂಬಂ. ಪೊಸಂಬನಂ.

## ಸ್ತ್ರೀಲಿಂಗ ರೂಪಂಗಳ್.

೮೨ ಪುಲ್ಲಿಂಗದಲ್ಲಿ ಅಕಾರಾಂತವಾದ ಸಂಖ್ಯಾ ಸರ್ವನಾಮ ಕೃದ್ಗುಣವಾಚಕಂಗಳಿಗೆ ಏಕವಚನದಲ್ಲಿ ಳಕಾರಾಗಮ ವಪ್ಪುದು.

ಪ್ರಯೋಗಂ॥ ಒರ್ವಳ್. ಒರ್ಬಳ್ ಅವಳ್, ಆವಳ್, ಮಾಡಿದಳ್, ಮಾಡಿದಪಳ್, ಮಾಡುವಳ್, ಮೆಲ್ಲಿದಳ್, ಇನಿಯಳ್, ಪೊಸಂಬಳ್.

೮೩ ಅನೆಯ ಪ್ರತ್ಯಯಾಂತವಾದ ಶಬ್ದಕ್ಕೆ ಏಕವಚನದಲ್ಲಿ ಳಕಾರಾಗಮವಪ್ಪುದು.

ಪ್ರಯೋಗಂ॥ ಒಂದನೆಯಳ್, ಪದಿನಾಲ್ಕನೆಯಳ್.

೮೪ (೧) ಮಗ ಶಬ್ದಕ್ಕೆ ಏಕವಚನದಲ್ಲಿ ಳಕಾರಾಗಮವಪ್ಪುದು.

---

(೧) ಶಶಾ, ಮಗಶಬ್ದಕ್ಕೆ ಸಾಮಾನ್ಯ ವಿಷಯದಲ್ಲಿ ಅಂತ್ಯಸ್ವರಕ್ಕೆ ಉಕಾರಾದೇಶವಪ್ಪುದು ಪ್ರಯೋಗಂ ॥ ಮಗು. ಅವುದು ಶಬ್ದಕ್ಕೆ ಏಕ ಎಂಬಾದೇಶವಪ್ಪುದು.

ಪ್ರಯೋಗಂ॥ ಮಗಳ್. ಮಗಳಂ.

೮೫ ಬಹುವ್ರೀಹಿಪದವು ಯ ಶಬ್ದಾಂತವಾಗಿರ್ದೊಡೆ ಳಕಾರಾಗಮವಪ್ಪುದು. ಪ್ರಯೋಗಂ॥ ಮೆಲ್ಲಿರ್ದೆಯಳ್. ಬೆಳ್ದಲೆಯಳ್.

ನಪುಂಸಕಲಿಂಗ ರೂಪಂಗಳ್.

೮೬ ಮುಂಬು, ಹಿಂಬು ಶಬ್ದಂಗಳ ಅಂತ್ಯ ವ್ಯಂಜನಕ್ಕೆ ತಕಾರಾದೇಶಮಪ್ಪುದು. ಪ್ರಯೋಗಂ॥ ಮುಂತು ಪಿಂತು.

೮೭ ಎಲ್ಲದು ಶಬ್ದಕ್ಕೆ ಲಿಂಗತ್ರಯದಲ್ಲಿಯುಂ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ಲೋಪವಪ್ಪುದು.

ಪ್ರಯೋಗಂ॥ ಎಲ್ಲಂ-ಎಲ್ಲವು, ಎಲ್ಲರ್,

ಪುಂಸ್ತ್ರೀಲಿಂಗಂಗಳಲ್ಲಿ ಬರ್ಪಕಾರ್ಯಂಗಳ್.

೮೮ ಕೆಲವು, ಪಲವು, ಶಬ್ದಂಗಳ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ॥ ಕೆಲರ್-ಪಲರ್

೮೯ ಕೆಲವು-ಪಲವು ಶಬ್ದಂಗಳ ಲಕಾರಕ್ಕೆ ಪರವಾದ ವರ್ಣಂಗಳ್ಗೆಅಂಬ, ಅಬ, ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಕೆಲಂಬರ್-ಕೆಲಬರ್, ಪಲಂಬರ್, ಪಲಬರ್

೯೦ ಅನಿತು-ಇನಿತು-ಎನಿತು ಶಬ್ದಂಗಳ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ "ಬ" ಶಬ್ದಾದೇಶವಪ್ಪುದು.

ಪ್ರಯೋಗಂ॥ ಅನಿಬರ್, ಇನಿಬರ್, ಎನಿಬರ್

೯೧ ಒಂಬತ್ತು, ಪತ್ತು, ಶಬ್ದಂಗಳ್ಗೆ ಕ್ರಮವಾಗಿ ಒಂಬದಿಂಬ, ಪದಿಂಬ, ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಒಂಬದಿಂಬರ್-ಪದಿಂಬರ್

೯೨ ಆವುದು ಶಬ್ದದ ಆದಿಸ್ವರಕ್ಕೆ ಪರದಲ್ಲಿರ್ಪ ವರ್ಣಂಗಳ್ಗೆ ರೇಫಾದೇಶವಪ್ಪುದು.

ಪ್ರಯೋಗಂ॥ ಆರ್. ಆರಂ—ಆರಿಂ ಆರ್ಗೆ

೯೩ ಮಗಶಬ್ದಕ್ಕೆ ಕ್ಕಳ್ ಪ್ರತ್ಯಯಂ ಪರವಾದೊಡೆ ಗ ಶಬ್ದಕ್ಕೆ ಲೋಪವಪ್ಪುದು.

ಪ್ರಯೋಗಂ॥ ಮಕ್ಕಳ್, ಮಕ್ಕಳ್ಗೆ (ಸೂ೧೨೮).

ಸ್ತ್ರೀಪ್ರತ್ಯಯಂಗಳ್.

೯೪ ಬಹು ವ್ರೀಹಿಸಮಾಸದಲ್ಲಿ ಪದಾಂತವಾದ (೧) ಅಕಾರಕ್ಕೆ ಆದೇಶವಾಗಿ ಇಪ್ರತ್ಯಯವಪ್ಪುದು.

ಪ್ರಯೋಗಂ॥ ನಿಡುಮೂಗಿ, ಕೆಂಗಣ್ಣಿ.

೯೫ ಅಕಾರಾಂತವಾದ ಅರಸ ಮೊದಲಾದ ಶಬ್ದಂಗಳ ಅಂತ್ಯ ಸ್ವರಕ್ಕೆ ಪೆಂಡತಿ ಎಂಬರ್ಥದಲ್ಲಿ ಆದೇಶವಾಗಿ „ ಇತಿ ,, ಪ್ರತ್ಯಯವಪ್ಪುದು. (೨)

ಪ್ರಯೋಗಂ॥ ಅರಸನ ಪೆಂಡತಿ= ಅರಸಿತಿ, ಪ್ರಧಾನಿತಿ. ಲಂಚವಣಿಗಿತಿ. ಕಾಲುರಿಚಿತಿ.

---

(೧) ಶ—ಶಾ ಕಪ್ರತ್ಯಯಾಂತವಾದ ಶಬ್ದಕ್ಕೆ "ಇ" ಪ್ರತ್ಯಯವಪ್ಪುದು. ಪ್ರಯೋಗಂ॥ ಕರಿಕಿ. ಬಿಳಿಕಿ. ಆಯ್ತ ಪ್ರತ್ಯಯಾಂತವಾದ ಶಬ್ದಕ್ಕೆ ವಿಕಲ್ಪವಾಗಿ "ಇ" ಪತ್ಯಯವಪ್ಪುದು. ಪ್ರ॥ ಸೂಳಾಯ್ತಿ-ಸೂಳಾಯ್ತೆ. ಅವಸರಾಯ್ತಿ-ಅವಸರಾಯ್ತೆ.

(೨) ಶ-ಶಾ ಉಗ-ಗ ಈ ಪ್ರತ್ಯಯಾಂತಂಗಳಾದ ಶಬ್ದಂಗಳ ಕಡೆಯ ಸ್ವರಕ್ಕೆ ಆದೇಶವಾಗಿ "ಇ-ಇತಿ" ಪ್ರತ್ಯಯಂಗಳಪ್ಪುವು ಪ್ರಯೋಗಂ॥ ನಾರುಗಿ-ನಾರುಗಿತಿ ತಾಳುಗಿ-ತಾಳುಗಿತಿ. ಮಾತುಗಿ-ಮಾತುಗಿತಿ-ಉಳಿಗ ಪ್ರತ್ಯಯಾಂತವಾದ ಶಬ್ದಕ್ಕೆ "ಇತಿ" ಪ್ರತ್ಯಯವಪ್ಪುದು. ಪ್ರಯೋಗಂ॥ ದೇವುಳಿಗಿತಿ. ಸಾವುಳಿಗಿತಿ.

೯೬ ಅಕಾರಾಂತನಾದ ಜಾತಿ ವಾಚಕಶಬ್ದದ ಕಡೆಯಸ್ವರಕ್ಕೆ ಆದೇಶವಾಗಿ ,, ಇತಿ ,, ಪ್ರತ್ಯಯವಪ್ಪುದು.

ಪ್ರಯೋಗಂ॥ ಬ್ರಾಹ್ಮಣಿತಿ. ಪಾರ್ವಿತಿ. ಪೂವಡಿಗಿತಿ. ಸರವಂದಿಗಿತಿ. ದೀವಟಿಗಿತಿ. ಕುಂಬರಿತಿ ಕಮ್ಮರಿತಿ.

೯೭ ಆಯ್ತ (೩) ವಂತಪ್ರತ್ಯಯಾಂತಂಗಳಾದ ಶಬ್ದಂಗಳಂತ್ಯಸ್ವರಕ್ಕೆ ಆದೇಶವಾಗಿ " ಎ " ಪ್ರತ್ಯಯವಪ್ಪುದು.

ಪ್ರಯೋಗಂ॥ ಸೂಳಾಯ್ತೆ. ಪಸಾಯ್ತೆ. ಗುಣವಂತೆ. ಪಣವಂತೆ.

೯೮ ಸಿತಗ ಮೊದಲಾದ ಶಬ್ದಂಗಳಂತ್ಯಸ್ವರಕ್ಕೆ ಆದೇಶವಾಗಿ " ಎ " ಪ್ರತ್ಯಯವಪ್ಪುದು.

ಪ್ರಯೋಗಂ॥ ಸಿತಗೆ, ಚದುರೆ, ಪಾಸ್ಬೆ, ಕಳ್ಳೆ, ಹೆಡ್ಡೆ, ಬಂಡೆ, ತುಂಟೆ, ಮೊದಲಾದುವು.

೯೯ (೪) ಕಾರ-ಗಾರ ಪ್ರತ್ಯಯಾಂತಂಗಳಾದ ಶಬ್ದಂಗಳಂತ್ಯಸ್ವರಕ್ಕೆ ಆದೇಶವಾಗಿ ,ತಿ, ಪ್ರತ್ಯಯವಪ್ಪುದು.

ಪ್ರಯೋಗಂ॥ ಆಟಕಾರ್ತಿ, ಬೇಟಕಾರ್ತಿ, ನುಡಿಕಾರ್ತಿ, ಬಳೆಗಾರ್ತಿ, ಮಾಲೆಗಾರ್ತಿ.

೧೦೦ ಅರಸಿ-ಪಾರ್ವಂತಿ-ಪಾರ್ವತಿ-ಒಕ್ಕಲಿತಿ ಮೊದಲಾದುವಂ ಮಹಾಕವಿ ಪ್ರಯೋಗದಿಂ ತಿಳಿವುದು.

---

(೩) ಶ-ಶಾ ಇಚ-ವಣಿಗ ಪ್ರತ್ಯಯಾಂತಂಗಳಾದ ಶಬ್ದಂಗಳ್ಗೆ "ಎ" ಪ್ರತ್ಯಯವಪ್ಪುದು. ಪ್ರಯೋಗಂ॥ ಕಲುರಿಚೆ. ಕರಹಡಿಚೆ. ಲಂಚವಣಿಗೆ. ಊಟವಣಿಗೆ. (೪) ಶ-ಶಾ. ಅ-ಪ್ರತ್ಯಯಾಂತಶಬ್ದಕ್ಕಂ, ವಳ-ವಳ್ಳ ಈ ಪ್ರತ್ಯಯಾಂತಂಗಳಾದ ಶಬ್ದಂಗಳಂತ್ಯಸ್ವರಕ್ಕೆ ಆದೇಶವಾಗಿಯುಂ " ತಿ " ಪ್ರತ್ಯಯವಪ್ಪುದು. ಪ್ರಯೋಗಂ ಕುಂಬಱತಿ. ಕಮ್ಮಱತಿ. ಮಡಿವಳ್ತಿ. ಸೆಟ್ಟಿವಳ್ತಿ. ಅಡಪವಳ್ತಿ. ಪಡೆವಳ್ತಿ.

## ವಿಭಕ್ತಿ ಪ್ರತ್ಯಯಂಗಳ್.

| (೧) ವಿಭಕ್ತಿಗಳ್ | ಪ್ರತ್ಯಯಂಗಳ್ | ವಿವರಣಂ. |
|---|---|---|
| ಪ್ರಥಮಾವಿಭಕ್ತಿ | ಮ್. | * ಷ-ವಿ "ಉ" ಪ್ರತ್ಯಯವಪ್ಪುದು |
| ಸಂಬೋಧನಪ್ರಥಮಾ ,, | ಎ-ಏ | |
| ದ್ವಿತೀಯಾ ,, | ಅಮ್. | "ಅನು" ಪ್ರತ್ಯಯವಪ್ಪುದು. |
| ತೃತೀಯಾ ,, | ಇಂ-ಇಂದಂ-ಇಂದೆ | "ಇಂದ" ಪ್ರತ್ಯಯವಪ್ಪುದು. |
| ಚತುರ್ಥೀ ,, | ಗೆ-ಕೆ-ಕ್ಕೆ. | "ಇಗೆ" ಪ್ರತ್ಯಯವಪ್ಪುದು. |
| ಪಂಚಮೀ ,, | ಅತ್ತಣಿಂ<br>ಅತ್ತಣಿಂದಂ<br>ಅತ್ತಣಿಂದೆ<br>ದೆಸೆಯಿಂ<br>ದೆಸೆಯಿಂದಂ<br>ದೆಸೆಯಿಂದೆ | ದಿಗ್ವಾಚಕಂಗಳಾದ ಅತ್ತ-ದೆಸೆ ಶಬ್ದಂಗಳ್ಗೆ ತೃತೀಯಾ ವಿಭಕ್ತಿಪ್ರತ್ಯಯಂಗಳಂ ಸೇರಿಸಿದೊಡೆ ಆಗುವ ಪದಂಗಳ್ ಪಂಚಮೀವಿಭಕ್ತಿ ಪ್ರತ್ಯಯಂಗಳೆನಿಪ್ಪುವು. ಈ ಪ್ರತ್ಯಯಂಗಳ್ ಷಷ್ಠೀವಿಭಕ್ತಿ ಪ್ರತ್ಯಯಂಗಳ್ಗೆ ಪರಮಾಗಿ ಬರ್ಪುವು. |
| ಷಷ್ಠೀ ,, | ಅ. ಆ. | |
| ಸಪ್ತಮೀ ,, | ಒಳ್-ಓಳ್-ಅಲ್ಲಿ ಷ-ವಿ 'ಒಳು-ಅಲಿ ಪ್ರತ್ಯಯಂಗಳಕ್ಕುಂ | |

ಮೇಲಣ ಪ್ರತ್ಯಯಂಗಳಲ್ಲಿ ಮ್ ಎಂಬುದು ಪ್ರಥಮೈಕವಚನದೊಳಂ ಉಳಿದುವು ವಚನತ್ರಯದೊಳಂ ಬರ್ಪುವು.

(೧) ಪದದ ಅರ್ಥಮಂ ವಿಭಾಗಿಸುದು ವಿಭಕ್ತಿ *ಷ= ಷಟ್ಪದಿ ವಿ= ವಿಕಲ್ಪಂ.

೧೦೨ (೧) ತತ್ಸಮ-ತದ್ಭವ-ದೇಶ್ಯ ಶಬ್ದಂಗಳ್ಗೆ ಪ್ರಥಮಾದಿ ವಿಭಕ್ತಿ ಪ್ರತ್ಯಯಂಗಳಪ್ಪುವು.

ಪ್ರಯೋಗಂ॥ ರಾಯಂ ರಾಯನು ರಾಯನಂ ರಾಯನಿಂ ರಾಯನಿಂದಂ ರಾಯನಿಂದೆ ರಾಯಂಗೆ ರಾಯನತ್ತಣಿಂ ರಾಯನತ್ತಣಿಂದಂ-ರಾಯನತ್ತಣಿಂದೆ ರಾಯನದೆಸೆಯಿಂ ರಾಯನದೆಸೆಯಿಂದಂ ರಾಯನದೆಸೆಯಿಂದೆ-ರಾಯನ ರಾಯನಾ ರಾಯನೊಳ್ ರಾಯನೋಳ್ ರಾಯನೊಳು ರಾಯನಲ್ಲಿ ರಾಯನಲಿ.

೧೦೩ ಏಕವಸ್ತುವಂ ಪೇಳ್ವುದು ಏಕವಚನಂ ವಸ್ತುದ್ವಯಮಂ ಪೇಳ್ವುದು ದ್ವಿವಚನಂ ಬಹು ವಸ್ತುವಂ ಪೇಳ್ವುದು ಬಹುವಚನಂ.

ಪ್ರಯೋಗಂ॥ ಏಕವಚನಕ್ಕೆ-ಮೇರು ಒಂದು. ದ್ವಿವಚನಕ್ಕೆ-ಕಣ್ಗಳ್ ರಾಮಲಕ್ಷ್ಮಣರ್. ಬಹುವಚನಕ್ಕೆ-ಸೂರ್ಯಚಂದ್ರಾನಲರ್ ನಾಡುಗಳ್.

ಏಕವಚನಂ.

೧೦೪ (೨) ಅಕಾರಾಂತಶಬ್ದಂಗಳ್ಗೆ ಪ್ರಥಮೈಕವಚನದಲ್ಲಿ "ಮ್" "ಉ" ಪ್ರತ್ಯಯಂಗಳಪ್ಪುವು.

ಪ್ರಯೋಗಂ ॥ ಅರಸ + ಮ್ = ಅರಸಮ್ ರಾಮಂ ಮಯಣಂ

---

(೧) ತತ್ಸಮಂ = ಸಂಸ್ಕೃತಂ. ತದ್ಭವಂ = ಸೂ॥೧೦೬ ದೇಶ್ಯಂ = ಕರ್ಣಾಟದೇಶದಲ್ಲಿ ಹುಟ್ಟಿದ ಶಬ್ದಂ ಏಕ, ದ್ವಿ, ತ್ರಿ, ಚತುರ್-ಪಂಚನ್-ಷಷ್-ಸಪ್ತನ್-ಅಷ್ಟನ್-ನವನ್-ದಶನ್ ಶಬ್ದಂಗಳ್ಗಂ ಸಂಸ್ಕೃತಾವ್ಯಯಂಗಳ್ಗಂ ತ್ಯದಾದಿಗಳ್ಗಂ ಶತ್ರಂತಂಗಳ್ಗಂ ಪ್ರಾತಿಪದಿಕ (ಲಿಂಗ) ಸಂಜ್ಞೆಯಿಲ್ಲ ಆದೊಡೆ ಇಹ ಅಮುತ್ರ-ಪರತ್ರ-ಉಭಯತ್ರ-ಅಸ್ತಿ-ಸ್ವಸ್ತಿ-ನಾಸ್ತಿ ವೃಥಾ ಮುಧಾರಘುಡಿಶಿ ಮೊದಲಾದ ಶಬ್ದಂಗಳ್ಗೆ ಲಿಂಗ ಸಂಜ್ಞೆಯುಂಟು ಪ್ರ॥ ಇಹಕಂ ಪರತ್ರಗಂ

(೨) ಷಟ್ಪದಿಯಲ್ಲಿ ವ್ಯಂಜನಾಂತಶಬ್ದಂಗಳ್ ವಿಕಲ್ಪವಾಗಿ ಸ್ವರಾಂ

ಆಕ್ಕಂ. ತಳಂ. ಮೃಗಂ. ಮೃಗವು. ನೆಲವು (ಅಕಾರಾಂತವಲ್ಲದೆಡೆಗಳಲ್ಲಿ ಬಾರದು) ಪ್ರ॥ ಪತಿ-ಸತಿ-ಸಿರಿ. ಹ್ರೀ. ಗುರು. ಗಂಡು. ಭ್ರೂ-ದಾತೃ-ಚದುರೆ-ವನಿತೆ-ತೊರೆ-ಗೋ ನೌ. ಕಣ್. ಬೆಳ್ ಅಳ್. ಆಮ್. ಮೆಯ್ ನೆಯ್ ಕೇರ್ ಪುಲ್ ಕಳ್ ಮೊದಲಾದುವು.

೧೦೫ ಪುಂಸ್ತ್ರೀ ಲಿಂಗಂಗಳಲ್ಲಿ ಅಕಾರಾಂತ ಶಬ್ದಂಗಳ್ಗೆ ಪರದಲ್ಲಿ ಸ್ವರಾದಿ ವಿಭಕ್ತಿ ಪ್ರತ್ಯಯಂಗಳಿರ್ದೊಡೆ ಪ್ರಕೃತಿ ಪ್ರತ್ಯಯಂಗಳ ನಡುವೆ ನಕಾರಾಗಮುಮುಂ ಚತುರ್ಥೀ ವಿಭಕ್ತಿಯಲ್ಲಿ ಪ್ರಕೃತಿ ಪ್ರತ್ಯಯಂಗಳನಡುವೆ ಬಿಂದುವುಂ ಅಪ್ಪುವು.

ಪ್ರಯೋಗಂ॥ ರಾಮನು ರಾಮ.ಂ ರಾಮನೇ ರಾಮನಂ ರಾಮನಿಂ ರಾಮಂಗೆ ರಾಮನತ್ತಣಿಂ ರಾಮನ ರಾಮನೊಳ್ ಅಕ್ಕನು ಅಕ್ಕನೇ

೧೦೬ ನಪುಂಸಕಲಿಂಗದಲ್ಲಿ ಅಕಾರಾಂತಶಬ್ದಕ್ಕೆ (೧) ಸಂಬೋಧನ ಪ್ರಥಮಾವಿಭಕ್ತಿ ಪ್ರತ್ಯಯಮಾದೊಡಂ * ದ್ವಿತೀಯಾ ವಿಭಕ್ತಿ ಪ್ರತ್ಯಯ ಮಾದೊಡಂ ಪರಮಾದೊಡೆ ಪ್ರಕೃತಿ ಪ್ರತ್ಯಯಂಗಳನಡುವೆ ವಿಕಲ್ಪವಾಗಿ (೩) ಮಕಾರ ವಕಾರಾಗಮಂಗಳಪ್ಪುವು.

---

ತಂಗಳಾಗಿ ಪ್ರಯೋಗಿಸಲ್ಪಡುವುವು. ಪ್ರ॥ ಕಣ್ ಕಣ್ಣು ತಾಯ್ ತಾಯಿ ಕಲ್ ಕಲ್ಲು. ತೇರ್ ತೇರು ಕಳ್ ಕಳ್ಳು ಆನ್. ಆನು. ನಾಮ್. ನಾವು.

(೧) ಸಂಬೋಧನೆಯಲ್ಲಿ ವಿಭಕ್ತಿ ಪ್ರತ್ಯಯಕ್ಕೆ ಲೋಪವುಂ, ಅಂತ್ಯ ಸ್ವರಕ್ಕೆ. ದೀರ್ಘವುಂ ವಿಕಲ್ಪವಾಗಿ ಅಪ್ಪುವು. ಪ್ರ॥ ರಾಮ. ರಾಮಾ.

* ಕ. ಭಾ. ಶ. ಮ. ಶ. ಶಾ. ದ್ವಿತೀಯಾ ವಿಭಕ್ತಿ ಪ್ರತ್ಯಯದಿಂ ಕೂಡಿ ನಕಾರಾಂತವಪ್ಪಶಬ್ದಂಗಳ ಕಡೆಯಸ್ವರಕ್ಕೆ ವಿಕಲ್ಪವಾಗಿ ದೀರ್ಘಾದೇಶವಪ್ಪುದು. ಪ್ರ॥ ಕಲ್ಲಾನೇರಿದಂ. ಬಿಲ್ಲನೇರಿಸಿದಂ.

(೩) ಕ. ಭಾ. ಶ, ಮ. ಶ, ಶಾ. ಸಂಸ್ಕೃತ ಶಬ್ದಕ್ಕೆ ನಿತ್ಯವಾಗಿ ಮಕಾರಾಗಮುವಪ್ಪುದು. ಪ್ರ॥ ಕುಲಮುಂ, ಬಲಮುಂ.

ಪ್ರಯೋಗಂ॥ ಮೃಗಮೆ ಮೃಗವೆ ಬನಮೇ ಬನವೇ ಮೃಗಮಂ ಬನಮಂ ಮೃಗವಂ ಬನವಂ.

೧೦೩ ನಪುಂಸಕ ಲಿಂಗದಲ್ಲಿ ಅಕಾರಾಂತಶಬ್ದಕ್ಕೆ ಚತುರ್ಥೀ ವಿಭಕ್ತಿಯಲ್ಲಿ ಕೆ ಕ್ಕೆ ಪ್ರತ್ಯಯಂಗಳಪ್ಪುವು.

೧೦೪ ನಪುಂಸಕಲಿಂಗದಲ್ಲಿ ಸಂಖ್ಯಾ-ಸರ್ವನಾಮ-ಪರಿಮಾಣ-ಗುಣವಾಚಕ ಶಬ್ದಂಗಳ್ಗಂ ಉದು-ವುದು ಪ್ರತ್ಯಯಾಂತಂಗಳಾದ ಕೃದಂತಂಗಳ್ಗಂ ಚತುರ್ಥೀ ವಿಭಕ್ತಿಯಲ್ಲಿ ಕೆ ಕ್ಕೆ ಪ್ರತ್ಯಯಂಗಳಪ್ಪುವು

ಪ್ರಯೋಗಂ॥ ಸಂಖ್ಯೆಗೆ= ಒಂದಕ್ಕೆ-ನೂರರ್ಕೆ, ಸರ್ವನಾಮಕ್ಕೆ ಅದರ್ಕ್ಕೆ-ಆವುದರ್ಕೆ ಪರಿಮಾಣಕ್ಕೆ-ಅನಿತರ್ಕೆ-ಇನಿತರ್ಕ್ಕೆ ಗುಣವಾಚಕಕ್ಕೆ—ಒಳ್ಳಿತರ್ಕ್ಕೆ-ಮೆಲ್ಲಿತರ್ಕೆ. ಕೃದಂತಕ್ಕೆ- ಮಾಳ್ಪುದರ್ಕೆ—ನಡೆವುದರ್ಕ್ಕೆ.

೧೦೫ ನಪುಂಸಕ ಲಿಂಗದಲ್ಲಿ ಅಕಾರಾಂತ ಶಬ್ದಕ್ಕೆ ಪರದಲ್ಲಿ ಸ್ವರಾದಿ ವಿಭಕ್ತಿ ಪ್ರತ್ಯಯಂಗಳಿರ್ದೊಡೆ ತೃತೀಯಾದಿ ವಿಭಕ್ತಿಗಳಲ್ಲಿ ಪ್ರಕೃತಿ ಪ್ರತ್ಯಯಂಗಳ ನಡುವೆ ದಕಾರಾಗಮವಪ್ಪುದು.

ಪ್ರಯೋಗಂ॥ ಮೃಗದಿಂ ಮೃಗದಿಂದಂ ಮೃಗದಿಂದೆ ಮೃಗದತ್ತಣಿಂ ಮೃಗದತ್ತಣಿಂದಂ ಮೃಗದತ್ತಣಿಂದೆ ಮೃಗದ ಮೃಗದೊಳ್ ಬನದಿಂಬನದತ್ತಣಿಂ ಬನದ ಬನದೊಳ್.

೧೧೦ ಷಷ್ಠಿಯಲ್ಲಿ ನಪುಂಸಕಲಿಂಗದಲ್ಲಿ ಅಕಾರಾಂತಶಬ್ದಂಗಳ ತೃತೀಯಾ ಸಪ್ತಮೀ ವಿಭಕ್ತಿ ಪ್ರತ್ಯಯಂಗಳ್ಗೆ ಕ್ರಮವಾಗಿ ವಿಕಲ್ಪವಾಗಿ ಎ-ಇ ಎಂಬ ಆದೇಶಂಗಳಪ್ಪುವು.

ಪ್ರಯೋಗಂ॥ ಮೃಗದಿಂ ಮೃಗದೆ ಮೃಗದೊಳ್-ಮೃಗದಿ ನೆಲದಿಂ ನೆಲದೆ. ನೆಲದೊಳ್-ನೆಲದಿ.

೧೧೧ ಅಕಾರಾಂತ ನಪುಂಸಕಲಿಂಗ ವಲ್ಲದ ಶಬ್ದಂಗಳ್ಗೆ ಚತುರ್ಥೀ ವಿಭಕ್ತಿಯಲ್ಲಿ ,, ಗೆ ,, (೧) ಪ್ರತ್ಯಯವಪ್ಪುದು.

ಪ್ರಯೋಗಂ॥ ಅಣ್ಣಂಗೆ-ಪೂಗೆ-ಪತಿಗೆ-ಸತಿಗೆ-ನುಡಿಗೆ-ಶ್ರೀಗೆ-ಕರುಗೆ-ಗುರುಗೆ-ವಧುಗೆ ದಾತೃಗೆ-ಪೊಲೆಗೆ-ವನಿತೆಗೆ-ಕಣ್ಗೆ-ಬಿಾಸ್ಗೆ-ಮೆಯ್ಗೆ ಪುಲ್ಗೆ-ನೀರ್ಗೆ-ಕಾಳ್ಗೆ.

೧೧೨ ಉ-ಊ-ಋ-ಓ-ಔ-ವರ್ಣಾಂತಂಗಳಾದ ಶಬ್ದಂಗಳ್ಗೆ ತೃತೀಯಾದಿ ವಿಭಕ್ತಿಗಳಲ್ಲಿ ಪ್ರಕೃತಿ ಪ್ರತ್ಯಯಂಗಳ ನಡುವೆ ವಿಕಲ್ಪವಾಗಿ " ಇನ್ " ಆಗಮವಪ್ಪುದು.

ಪ್ರಯೋಗಂ॥ ಗುರು + ಇಂ = ಗುರು + ವ್ + ಇನ್ + ಇಂ-ಗುರುವಿನಿಂ-ಗುರುವಿಂ ಗುರುವಿಂಗೆ-ಗುರುಗೆ. ಗುರುವಿನತ್ತಣಿಂ-ಗುರುವತ್ತಣಿಂ ಗುರುವಿನ-ಗುರುವ. ಗುರುವಿನಲ್ಲಿ ಗುರುವಲ್ಲಿ. ಇಂತು-ಭ್ರೂ-ದಾತೃ ಗೋ-ನೌ-ಮೊದಲಾದುವು.

೧೧೩ ಉಕಾರಾಂತವಾದ ಕಾಲವಾಚಕ ಶಬ್ದಂಗಳ್ಗೆ ಪ್ರಥಮಾ ದ್ವಿತೀಯಾ ವಿಭಕ್ತಿಪ್ರತ್ಯಯಂಗಳ್ ಬಾರವು. ಸಪ್ತಮೀವಿಭಕ್ತಿ ಪ್ರತ್ಯಯಂ ವಿಕಲ್ಪವಾಗಿ ಅಪ್ಪುದು.

ಪ್ರಯೋಗಂ॥ ಪ್ರ॥ ಅಂದು. ದ್ವಿ-ಅಂದು ಸ-ಅಂದಿನೊಳ್-ಅಂದು ಉಳಿದು ವಂಗುರುಶಬ್ದದಂತರಿವುದು

೧೧೪ ನಪುಂಸಕಲಿಂಗದಲ್ಲಿ ಉದು-ವುದು ಪ್ರತ್ಯಯಾಂತಂಗಳಾದ ಕೃದ್ವಾಚಕಂಗಳ್ಗಂ ಸ್ವರಾಂತವಾದ ಸಂಖ್ಯಾ ಸರ್ವನಾಮ ಪರಿಮಾಣ ವಾಚಕಂಗಳ್ಗಂ ತೃತೀಯಾದಿ ವಿಭಕ್ತಿಗಳಲ್ಲಿ ಪ್ರಕೃತಿಯ ಅಂತ್ಯಸ್ವರಕ್ಕೆ (೧) ಅರ್ ಎಂಬಾದೇಶವಪ್ಪುದು.

---

(೧) ಅಕಾರಾಂತ ಶಬ್ದಂಗಳ್ಗೆಗೆ ಪ್ರತ್ಯಯಂ ಪರವಾದೊಡೆ ಪ್ರಕೃತಿ ಪ್ರತ್ಯಯಂಗಳ ನಡುವೆ ಬಿಂದುವಪ್ಪುದು.

ಪ್ರಯೋಗಂ॥ ಪೊಳ್ಪುದು + ಇಂ = ಪೊಳ್ಪುದ್ + ಅರ್ + ಇಂ ಪೊಳ್ಪುದರಿಂ ಪೊಳ್ಪುದರ್ಕೆ ಪೊಳ್ಪುದರತ್ತಣಿಂ—ಪೊಳ್ಪುದರ ಪೊಳ್ಪುದರೊಳ್ ಇಂತು ನಡೆವುದು-ಎರಡು. ಇದು. ಅನಿತು. ಮೆಲ್ಲಿತು.

೧೧೫ ಪಗಲ್-ಇರುಳ್ ಶಬ್ದಂಗಳ್ಗೆ ತೃತೀಯಾದಿ ವಿಭಕ್ತಿಗಳಲ್ಲಿ ವಿಕಲ್ಪವಾಗಿ ಇನಾಗಮವಪ್ಪುದು.

ಪ್ರಯೋಗಂ॥ ಪಗಲಿನಿಂ-ಪಗಲಿಂ ಪಗಲಿಂಗೆ-ಪಗಲ್ಗೆ. ಪಗಲಿನತ್ತಣಿಂ ಪಗಲತ್ತಣಿಂ. ಪಗಲಿನ—ಪಗಲ ಪಗಲಿನೊಳ್-ಪಗಲೊಳ್ ಇಂತು ಇರುಳ್ ಶಬ್ದಮುಮಂ ಅರಿವುದು.

೧೧೬ ಆಗಳ್-ಈಗಳ್ ಶಬ್ದಂಗಳ್ಗೆ ತೃತೀಯಾದಿ ವಿಭಕ್ತಿಗಳಲ್ಲಿ ನಿತ್ಯವಾಗಿ ಇನಾಗಮವಪ್ಪುದು.

ಪ್ರಯೋಗಂ॥ ಆಗಳಿನಿಂ ಆಗಳಿಂಗೆ ಈಗಳಿನಿಂ ಈಗಳಿಂಗೆ.

೧೧೭ ಅಕಾರಾಂತ ದಿಗ್ವಾಚಕ ಶಬ್ದಂಗಳ ಅಂತ್ಯಸ್ವರಕ್ಕೆ ಪ್ರಥಮಾ ದ್ವಿತೀಯಾ—ಸಪ್ತಮೀವಿಭಕ್ತಿಗಳಲ್ಲಿ ವಿಭಕ್ತಿ ಪ್ರತ್ಯಯಂಗಳ್ಗೆ ಅಲ್ ಎಂಬಾದೇಶವಪ್ಪುದು.

ಪ್ರಯೋಗಂ॥ ಪ್ರ-ಮೂಡಲ್ ದ್ವಿ-ಮೂಡಲ್ ಸ-ಮೂಡಲ್.

೧೧೮ ದಿಗ್ವಾಚಕ ಶಬ್ದಂಗಳ ಅಂತ್ಯಸ್ವರಕ್ಕೆ ತೃತೀಯಾದಿ ವಿಭಕ್ತಿಗಳಲ್ಲಿ ಅಣ್ ಎಂಬಾಗಮವಪ್ಪುದು.

ಪ್ರಯೋಗಂ॥ ಮೂಡಣಿಂ ಮೂಡಣ್ಗೆ ಮೂಡಣತ್ತಣಿಂ ಮೂಡಣ ಅತ್ತಣಿಂ ಅತ್ತಣ್ಗೆ ಮೊದಲಾದುವು

೧೧೯ ಒಳಗು ಪೊರಗು ಪೊಡಲ್ ಕಡೆ ಮುಂದು ಪಿಂದು ಕೆಳಗು-ಮೇಗು ಈ ಶಬ್ದಂಗಳ್ಗೆ ತೃತೀಯಾದಿ ವಿಭಕ್ತಿಗಳಲ್ಲಿ ವಿಕಲ್ಪವಾಗಿ ಅಣ್ ಎಂಬಾಗಮವಪ್ಪುದು.

ಪ್ರಯೋಗಂ॥ ಒಳಗಣಿಂ ಒಳಗಿಂ ಒಳಗಿನೊಳ್ ಒಳಗೆ ಇಂತು ಉಳಿದುವನರಿವುದು

೧೬೦ ಉಕಾರಾಂತವಾದ ದಿಗ್ವಾಚಕ ಶಬ್ದಂಗಳ ಅಂತ್ಯಸ್ವರಕ್ಕೆ ಸಪ್ತಮೀ ವಿಭಕ್ತಿಯಲ್ಲಿ ಎಕಾರಾದೇಶವಪ್ಪುದು. ಮೇಲೆಂಬ ಶಬ್ದಕ್ಕೆ ವಿಕಲ್ಪವಾಗಿ ಎಕಾರಾಗಮವಪ್ಪುದು.

ಪ್ರಯೋಗಂ॥ ಒಳಗೆ ಪೊರಗೆ ನಡುವೆ ಮುಂದೆ-ಪಿಂದೆ-ಮೇಗೆ-ಮೇಲೆ.

೧೬೧ ಒಳಗು ಮೊದಲಾದ ದಿಗ್ವಾಚಕ ಶಬ್ದಂಗಳ ಗು ಶಬ್ದಕ್ಕೆ, ಕೆ, ಕ್ಕೆ ಪ್ರತ್ಯಯಂ ಪರವಾದೊಡೆ, ಲೋಪವಪ್ಪುದು.

ಪ್ರಯೋಗಂ॥ ಒಳಕ್ಕೆ ಪೊರಕ್ಕೆ ಕೆಳಕ್ಕೆ.

೧೬೨ ಮುಂದು ಪಿಂದು ಶಬ್ದಂಗಳ್ಗೆ ಕೆ, ಕ್ಕೆ ಪ್ರತ್ಯಯಂ ಪರವಾದೊಡೆ ಪ್ರಕೃತಿಯ ಅಂತ್ಯಸ್ವರಕ್ಕೆ ವಿಕಲ್ಪವಾಗಿ ಅಕಾರಾದೇಶವಪ್ಪುದು.

ಪ್ರಯೋಗಂ॥ ಮುಂದಕ್ಕೆ ಮುಂದಿಂಗೆ ಮುಂದಣ್ಗೆ ಇಂತು ಪಿಂದು ಶಬ್ದಮುಂ ಅರಿವುದು

ದ್ವಿವಚನ ಬಹುವಚನಂಗಳ್.

೧೬೩ ಪುಲ್ಲಿಂಗದಲ್ಲಿ ಅಕಾರಾಂತ ಶಬ್ದಂಗಳ್ಗಂ ಸ್ತ್ರೀಲಿಂಗದಲ್ಲಿ ಇ ಈ ಎಕಾರಾಂತ ಶಬ್ದಂಗಳ್ಗಂ (೧) „ಅರ್„ ಪ್ರತ್ಯಯವಪ್ಪುದು.

---

(೧) ನಪುಂಸಕಲಿಂಗದಲ್ಲಿ ಕೆಲವು-ಪಲವು ಎಲ್ಲವು ಶಬ್ದಂಗಳ ಅಂತ್ಯಸ್ವರಕ್ಕೆ ತೃತೀಯಾದಿವಿಭಕ್ತಿಗಳಲ್ಲಿ ಅರಾದೇಶ ವಪ್ಪುದು. ಪ್ರ॥ ಕೆಲವರಿಂ ಪಲವರಿಂ ಕೆಲವರ್ಕೆ-ಪಲವರ್ಕೆ ಎಲ್ಲವರಿಂ ಎಲ್ಲವರ್ಗೆ.

ಪ್ರಯೋಗ॥ ಬುಧರ್, ವೈಣಿಕರ್, ಅವರ್, ಕೆಳೆಯರ್ ॥ ನಾರಿಯರ್, ಗೌರಿಯರ್, ಹುಡುಗಿಯರ್, ಅಚ್ಚರಿಯರ್, ಸ್ತ್ರೀಯರ್ ವನಿತೆಯರ್ ಖಂಡಿತೆಯರ್, ಚದುರೆಯರ್, ತುಂಟೆಯರ್. (೧)

೧೨೪ ಬಂಧು ವಾಚಕಂಗಳಾದ ಅಕಾರಾಂತ ಶಬ್ದಂಗಳ್ಗೆ (೨) "ದಿರ್" ಪ್ರತ್ಯಯಮುಂ ಪುಂಸ್ತ್ರೀಲಿಂಗಂಗಳಲ್ಲಿ ಕೆಲವೆಡೆಗಳಲ್ಲಿ "ವಿರ್" ಪ್ರತ್ಯಯಮುಂ ವಿಕಲ್ಪವಾಗಿ ಅಪ್ಪುವು.

ಪ್ರಯೋಗಂ॥ ಅಣ್ಣಂಗಳ್ ಅಣ್ಣಂದಿರ್ ಅಕ್ಕಂದಿರ್ ಅಕ್ಕಂಗಳ್ ಅತ್ತೆವಿರ್, ಅತ್ತೆಯರ್ ಸೊಸೆವಿರ್ ಸೊಸೆಯರ್. ತಾಯ್ಗಳ್. ತಾಯ್ವಿರ್,

೧೨೫ ತೊಳ್ತು ಪೆಂಡ ಈ ಶಬ್ದಂಗಳ್ಗೆ "ಇರ್" ಪ್ರತ್ಯಯವಪ್ಪುದು. ಪ್ರಯೋಗಂ॥ ತೊಳ್ತಿರ್ ಪೆಂಡಿರ್.

೧೨೬ ಪುಲ್ಲಿಂಗದಲ್ಲಿಯುಂ, ಸ್ತ್ರೀಲಿಂಗದಲ್ಲಿಯುಂ ಸಂಖ್ಯಾವಾಚಕ ಶಬ್ದಂಗಳ್ಗೆ "ವರ್" ಪ್ರತ್ಯಯ ಮಪ್ಪುದು.

ಪ್ರಯೋಗಂ॥ ಮೂವರ್, ನಾಲ್ವರ್ ಐವರ್ (೩)

---

(೧) ಷಟ್ಪದಿಯಲ್ಲಿ ಬಹುವಚನಪ್ರತ್ಯಯಂಗಳ್ಗೆ ಪರವಾಗಿ ಪ್ರಥಮಾವಿಭಕ್ತಿಯಲ್ಲಿ ವಿಕಲ್ಪವಾಗಿ ಉ ಪ್ರತ್ಯಯಮಪ್ಪುದು. ಪ್ರ॥ ಬುಧರು. ಅಣ್ಣಂದಿರು. ಪೆಂಡಿರು. ಮೂವರು. ಮಕ್ಕಳು. ಅಮ್ಮಂದಿರು. ಗಿಡುಗಳು.

(೨) ಅಕಾರಾಂತ ಶಬ್ದಕ್ಕೆ 'ದಿರ್' ಪ್ರತ್ಯಯಂ ಪರವಾದೊಡೆ ಪ್ರಕೃತಿಪ್ರತ್ಯಯಂಗಳ ನಡುವೆ ಬಿಂದುವಪ್ಪುದು. ಷಟ್ಪದಿಯಲ್ಲಿ ವಿಕಲ್ಪಂ. ಪ್ರ॥ ಅವಂದಿರ್. ಅವದಿರ್. ಶ. ಶಾ. ಅತ್ತೆದಿರ್. ಭ್ರಾತೃವಿರ್.

(೩) ಹ್ರಸ್ವಸ್ವರಾದಿಯಾದ ಸಂಖ್ಯಾವಾಚಕ ಶಬ್ದಕ್ಕೆ ಪರವಾದ ವಕಾರಕ್ಕೆ ಬಕಾರಾದೇಶವಪ್ಪುದು. ಪ್ರ॥ ಒರ್ಬಂ. ಇರ್ಬರ್. ಎಣ್ಬರ್.

೧೨೭ ಸ್ತ್ರೀಲಿಂಗದಲ್ಲಿ ಅದು-ಇದು-ಉದು ಶಬ್ದಂಗಳ ದುಶಬ್ದಕ್ಕೆ ಆದೇಶವಾಗಿ ,, ವರ್ ,, ಪ್ರತ್ಯಯಮಪ್ಪುದು.

ಪ್ರಯೋಗಂ॥ ಅವರ್-ಇವರ್-ಉವರ್.

೧೨೮ ಮಗ ಶಬ್ದಕ್ಕೆ ಲಿಂಗತ್ರಯದಲ್ಲಿಯುಂ (೧) ಮಕ್ಕಳ್ ಎಂಬರೂಪಮಪ್ಪುದು. ಪ್ರಯೋಗಂ॥ ಮಕ್ಕಳ್ ಮಕ್ಕಳಂ.

೧೨೯ ಅರ್ ಪ್ರತ್ಯಯಾಂತಮಾದ ಶಬ್ದಕ್ಕೆ ಪರಮಾಗಿ ವಿಕಲ್ಪಮಾಗಿ ಕಳ್ ಪ್ರತ್ಯಯಮಪ್ಪುದು.

ಪ್ರಯೋಗಂ॥ ಪಂಡಿತರ್ಕಳ್ ಕೆಳೆಯರ್ಕಳ್ ಸೊಸೆಯರ್ಕಳ್.

೧೩೦ ಅವಳ್-ಇವಳ್-ಉವಳ್ ಶಬ್ದಂಗಳ್ಗೆ ವಿಕಲ್ಪಮಾಗಿ ದಿರ್ ಪ್ರತ್ಯಯಮಪ್ಪುದು. ದಿರ್ ಪ್ರತ್ಯಯಂ ಬಾರದೊಡೆ ಳಕಾರಾಂತಮಾದ ಸ್ತ್ರೀಲಿಂಗ ಶಬ್ದದ ಳಕಾರಕ್ಕೆ ಆದೇಶಮಾಗಿ "ಅರ್" ಪ್ರತ್ಯಯಮಪ್ಪುದು,

ಪ್ರಯೋಗಂ ॥ ಅವಳ್ದಿರ್-ಇವಳ್ದಿರ್-ಉವಳ್ದಿರ್-ಅವರ್-ಇನಿಯರ್-ಒಳ್ಳಿದರ್-ಪಿಡಿದರ್-ನಾಲ್ಕನೆಯರ್.

೧೩೧ ನಪುಂಸಕದಲ್ಲಿ ಅದು-ಇದು-ಉದು-ಆವುದು-ಎಲ್ಲದು-ಪೆರದು-ಪೆರತು ಈ ಶಬ್ದಂಗಳ ಅಂತ್ಯಸ್ವರದಿಂದೆ ಕೂಡಿದ ವ್ಯಂಜನಕ್ಕೆ ಆದೇಶಮಾಗಿ "ವು" ಪ್ರತ್ಯಯಮಪ್ಪುದು.

ಪ್ರಯೋಗಂ ॥ ಅವು ಇವು. ಉವು. ಆವುವು. ಎಲ್ಲವು. ಪೆರವು.

---

(೧) ಶ-ಮ. ಶ-ಶಾ. ನಾಡು ಮೊದಲಾದ ಶಬ್ದಂಗಳ್ಗೆ ಕಳ್ ಪ್ರತ್ಯಯಮುಂ, ಅರ್ ಪ್ರತ್ಯಯಾಂತ ಶಬ್ದಂಗಳ್ಗೆ ಇರ್ ಪ್ರತ್ಯಯಮುಂ ವಿಕಲ್ಪಮಾಗಿ ಅಪ್ಪುದು. ಪ್ರ ॥ ನಾಳ್ಕಳ್-ನಾಡುಗಳ್. ಪಂಡಿತರಿರ್. ಸ್ತ್ರೀಯರಿರ್.

೧೩೦ ನಪುಂಸಕಲಿಂಗದಲ್ಲಿ ಗುಣವಾಚಕ ಶಬ್ದಕ್ಕೆ "ವು" ಪ್ರತ್ಯಯಮಪ್ಪುದು. ಮೇಣ್ ಅಂತ್ಯವಾದ ದು ಶಬ್ದಕ್ಕೆ ಅಕಾರವುಂ. ತಕಾರಕ್ಕೆ ದಕಾರವುಂ ಆದೇಶವಾಗಿಬಪ್ಪುವು.

ಪ್ರಯೋಗಂ ॥ ಬಿಳಿದು + ವು = ಬಿಳಿ + ಅ + ವು = ಬಿಳಿಯವು. ಇನಿಯವು. ಒಳ್ಳಿತು + ವು = ಒಳ್ಳಿದುವು. ಮೆಲ್ಲಿದುವು

೧೩೩. ಪುಲ್ಲಿಂಗದಲ್ಲಿ ಅಕಾರಾಂತವಲ್ಲದ ಸಂಸ್ಕೃತಶಬ್ದಂಗಳ್ಗೆ "ಗಳ್" ಪ್ರತ್ಯಯವಪ್ಪುದು.

ಪ್ರಯೋಗಂ ॥ ಪತಿಗಳ್-ಗುರುಗಳ್. ದಾತೃಗಳ್.

೧೩೪ ಸ್ತ್ರೀಲಿಂಗದಲ್ಲಿ ಉಕಾರಾಂತವಾದ ಸಂಸ್ಕೃತಶಬ್ದಕ್ಕೆ ಗಳ್ ಪ್ರತ್ಯಯವಪ್ಪುದು. ಪ್ರಯೋಗಂ ॥ ವಧು ಗಳ್-ಭೀರುಗಳ್.

೧೩೫ ನಪುಂಸಕಲಿಂಗದಲ್ಲಿ ಸಂಸ್ಕೃತಶಬ್ದಂಗಳ್ಗೆ "ಗಳ್" ಪ್ರತ್ಯಯವಪ್ಪುದು.

ಪ್ರಯೋಗಂ ॥ ವೃಕ್ಷಂಗಳ್. ಗಿರಿಗಳ್. ವಿಧುಗಳ್. ಲತೆಗಳ್. ಗೋಗಳ್.

೧೩೬ ಅಕಾರಾಂತಶಬ್ದಕ್ಕೆ (೧) ಗಳ್ ಪ್ರತ್ಯಯಂ ಪರವಾದೊಡೆ ಪ್ರಕೃತಿಪ್ರತ್ಯಯಂಗಳ ನಡುವೆ ವಿಕಲ್ಪವಾಗಿ ಬಿಂದುವಪ್ಪುದು.

ಪ್ರಯೋಗಂ॥ ದೇಶಂಗಳ್-ದೇಶಗಳ್. ಬನಂಗಳ್-ಬನಗಳ್.

೧೩೭ ಕರ್ಣಾಟಕದ ಸ್ವರಾಂತ ಶಬ್ದಂಗಳ್ಗೆ ಬಹುಳವಾಗಿ "ಗಳ್" ಪ್ರತ್ಯಯಮಪ್ಪುದು.

ಪ್ರಯೋಗಂ ॥ ಅಣ್ಣಂಗಳ್. ಅಕ್ಕಂಗಳ್. ಪೊಲಂಗಳ್. ಗಿಳಿಗಳ್. ರೂಪುಗಳ್. ತಂದೆಗಳ್. ಪೊಳೆಗಳ್. ಕೈಗಳ್.

---

(೧) ಕ-ಭಾ-ಶ-ಮಶ-ಶಾ. ಸಂಸ್ಕೃತದಲ್ಲಿ ನಿತ್ಯಂ

೧೩೪ ವ್ಯಂಜನಾಂತಶಬ್ದಂಗಳ್ಗೆ * "ಗಳ್" ಪ್ರತ್ಯಯ ಮಪ್ಪುದು.

ಪ್ರಯೋಗಂ ॥ ಕಣ್ಗಳ್ ಪಾಸ್ಗಳ್. ನೀಂಗಲ್. ತಾಯ್ಗಳ್ ಕೇರ್ಗಳ್. ಕೀಲ್ಗಳ್. ಮುಳ್ಗಳ್.

೧೩೫ ಏನ್. ಈಶಬ್ದಂ ಪ್ರಥಮಾವಿಭಕ್ತಿಯಲ್ಲಿ ಏನೆಂದುಂ-ಏತ ದುಂರೆಂ ಚತುರ್ಥೀವಿಭಕ್ತಿಯಲ್ಲಿ ಏತರ್ಕೆ-ಏಕೆ ಎಂದುಂ-ಅಪ್ಪುವು ತೃತೀಯಾದಿವಿಭಕ್ತಿಗಳಲ್ಲಿ ಏನ್ ಎಂಬ ಶಬ್ದಕ್ಕೆ ಏತರೆಂಬಾದೇಶ ವಪ್ಪುದು.

ಪ್ರಯೋಗಂ ॥ ಏನ್. ಏತರ್. ಏನಂ. ಏತರಿಂ. ಏತರ್ಕೆ. ಏಕೆ ಏತರತ್ತಣಿಂ. ಏತರ. ಏತರಲ್ಲಿ.

ನಿನ್-ಎರ್-ನರ್-ತನ್ ಈ ಶಬ್ದಂಗಳ್ಗೆ ಬರ್ಪ ಕಾರ್ಯಂಗಳ್.

೧೩೬ ನಿನ್-ನನ್-ಎನ್-ತನ್ ಶಬ್ದಂಗಳ್ಗೆ ಲಿಂಗತ್ರಯದಲ್ಲಿ ಯುಂ ಪ್ರಥಮೈಕವಚನದಲ್ಲಿ ನೀನ್-ನಾನ್-ಆನ್-ತಾನ್- ಎಂದುಂ ಬಹುವಚನದಲ್ಲಿ ನೀಮ್-ನಾಮ್-ಆಮ್-ತಾಮ್ ಎಂದುಂ ಅಪ್ಪುವು.

೧೩೭ ನಿನ್ ಮೊದಲಾದ ಶಬ್ದಂಗಳ್ಗೆ ದ್ವಿವಚನ ಬಹುವಚ ನಂಗಳಲ್ಲಿ (ಸೂ. ೧೩೪) ಮಕಾರಾದೇಶವಪ್ಪುದು. ಮೇಣ್‌ಪರ ದಲ್ಲಿ ಸ್ವರಾದಿ ವಿಭಕ್ತಿಪ್ರತ್ಯಯವಿರ್ದೊಡೆ ಮಕಾರಕ್ಕೆ ದ್ವಿತ್ವ ಮಪ್ಪುದು.

ಪ್ರಯೋಗಂ ॥ ನಿಮ್ಮಂ-ಎಮ್ಮಂ-ನಿಮ್ಮತ್ತಣಿಂ-ಎಮ್ಮತ್ತಣಿಂ.

---

* ಅವು-ಇವು-ಮಕ್ಕಳ್. ಈ ಶಬ್ದಂಗಳ್ಗೆ-ವಿಕಲ್ಪವಾಗಿ ಗಳ್ ಪ್ರತ್ಯಯ ಮಪ್ಪುದು.

೧೮೦ ನಿನ್ ಮೊದಲಾದ ಶಬ್ದಂಗಳ್ಗೆ ವ್ಯಂಜನಾದಿ ವಿಭಕ್ತಿ ಪ್ರತ್ಯಯಂ ಪರವಾದೊಡೆ ಪ್ರಕೃತಿಪ್ರತ್ಯಯಂಗಳ ನಡುವೆ ಅಕಾರಾಗಮವಪ್ಪುದು.

ಪ್ರಯೋಗಂ ॥ ನಿನಗೆ-ನಿಮಗೆ-ಎನಗೆ—ಎಮಗೆ—ತನಗೆ-ತಮಗೆ.

೧೮೩. ನಿನ್ ಮೊದಲಾದ ಶಬ್ದಂಗಳ್ಗೆ ಷಷ್ಠೀವಿಭಕ್ತಿಪ್ರತ್ಯಯಕ್ಕೆ ವಿಕಲ್ಪವಾಗಿ ತು-ತ್ತು- (೧) ಎಂಬಾದೇಶಂಗಳುಂ ಪ್ರಕೃತಿಗೆ ಪರವಾಗಿ ಅಕಾರಾಗಮಮುಂ ಅಪ್ಪುದು.

ಪ್ರಯೋಗಂ ॥ ನಿನತು-ನಿನತ್ತು-ನಿನ್ನ. ನಿಮತು-ನಿಮತ್ತು-ನಿಮ್ಮ.

ಕಾರಕಂಗಳ್.

೧೮೮ (೧) ಕರ್ತೃವುಂ ಕರ್ಮಮುಂ ಉಕ್ತ (ಪ್ರಧಾನ) ವಾದೊಡೆ ಆ ಕರ್ತೃ ಕರ್ಮವಾಚಕಂಗಳ್ಗೆ ಪ್ರಥಮಾವಿಭಕ್ತಿಯಪ್ಪುದು.

ಪ್ರಯೋಗಂ ॥ ಹರಿ ಕೊಳಲನೂದಿದಂ-ಇಲ್ಲಿ ಊದು ಧಾತುವಿಂದೆ ಹರಿ ಎಂಬ ಕರ್ತೃ ಉಕ್ತವಾಯ್ತು. ಬಾಹು ದಯೆಗೆಯ್ದಂ-ಗೋವು ಗೋವಳನಿಂ ಕರೆಯಲ್ಪಟ್ಟುದು. ದುರ್ಯೋಧನಂ ಭೀಮನಿಂ ಕರೆಯಲ್ಪಟ್ಟಂ.

---

(೧) ತನ್, ನಿನ್, ಎಣ್ ಶಬ್ದಂಗಳ್ಗೆ ಬಹುವಚನದಲ್ಲಿ ತು-ತ್ತು ಪ್ರತ್ಯಯಂ ಪರದಲ್ಲಿರ್ದೊಡೆ ಪ್ರಕೃತಿಯ ಅಂತ್ಯ ವ್ಯಂಜನಕ್ಕೆ ವಿಕಲ್ಪವಾಗಿ ದ್ವಿತ್ವಮಪ್ಪುದು. ॥ಪ್ರ॥ ತಮ್ಮತು-ನಿಮ್ಮತು-ಎಮ್ಮತು-ನಮ್ಮತು—ನಿಮತು-ಎಮತು-ತಮತು. ತ-ತಾ-ನಿನ್-ಎನ್ ತಣ ಶಬ್ದಂಗಳ್ಗೆ ಪರದಲ್ಲಿ ಸಂಖ್ಯಾವಾಚಕಶಬ್ದವಿರ್ದೊಡೆ ಷಷ್ಠೀವಿಭಕ್ತಿಪ್ರತ್ಯಯಕ್ಕೆ ವಿಕಲ್ಪವಾಗಿ ಉತು ಎಂಬಾದೇಶವಪ್ಪುದು. ಪ್ರ॥ ನಿಮ್ಮುತ್ಯೈವರ್-ಎಮ್ಮುತೊಂಬದಿರ್. ತಮ್ಮುತ್ಯೈವರ್-(೨) ಷಟ್ಪದಿಯುಳ್ಳಿ ಪ್ರಥಮಾವಿಭಕ್ತಿಯಲ್ಲಿ ವಿಕಲ್ಪದಿಂ ಪ್ರಕೃತಿಪ್ರಯೋಗವಪ್ಪುದು. ಪ್ರ॥ ವಿದುರ-ವಿದುರಂ. ಕೃಷ್ಣ-ಕೃಷ್ಣಂ.

೧೮೫ ಸಂಬೋಧನೆಯಲ್ಲಿ ಪ್ರಥಮಾವಿಭಕ್ತಿಯಪ್ಪುದು.

ಪ್ರಯೋಗಂ ॥ ದೇವ ಬಾರೈ ಅರಸ ಕೇಳೈ. ಹುಡುಗಿ ಓದೌ. ಲತೆ ಕುಣಿ.

೧೮೬ ಕರ್ಮಂ ಅನುಕ್ತಮಾದೊಡೆ ಕರ್ಮವಾಚಕಶಬ್ದಕ್ಕೆ ದ್ವಿತೀಯಾವಿಭಕ್ತಿಯಪ್ಪುದು.

ಪ್ರಯೋಗಂ ॥ ಹುಡುಗಂ ಪಳೆಮಾತನೋದಿದಂ. ಅರಸು ಪಗೆಯಂ ಗೆಲ್ದಂ.

೧೮೭ ಕಾಲಾಧ್ವವಾಚಕಂಗಳ್ಗೆ ಅತ್ಯಂತಸಂಯೋಗ (ಎಡವಿಡದಿರ್ಪುದು) ಉಂಟಾದೊಡೆ ದ್ವಿತೀಯಾವಿಭಕ್ತಿಯಪ್ಪುದು.

ಪ್ರಯೋಗಂ ॥ ಕಾಲಕ್ಕೆ—ಬರಿಸಮಂ ಕಳೆದಂ. ರಾತ್ರಿಯಂ ನೂಂಕಿದಂ, ಅಧ್ವಕ್ಕೆ—ಕ್ರೋಶಾರ್ಧಮಂ ಓಡಿದಂ. ಗಾವುದಮಂ ನಡೆದಂ.

೧೮೮ ಗತಿಶಬ್ದಾರ್ಥಂಗಳಾದ ಧಾತುಗಳ ಸಂಬಂಧಿಯಾದ ಅನುಕ್ತಮಾದ (೧) ಪ್ರಯೋಜ್ಯ (ಪ್ರೇರ್ಯ)ಕರ್ತೃವಿಂಗೆ ದ್ವಿತೀಯಾವಿಭಕ್ತಿಯಪ್ಪುದು.

ಪ್ರಯೋಗಂ ॥ ಗತ್ಯರ್ಥಕ್ಕೆ—ಅರಸಂ ದೂತನಂ ಮನೆಯಂ ಪುಗಿಸಿದಂ. ಶಬ್ದಾರ್ಥಕ್ಕೆ—ಅರಸನರಸಿಯನಿನಿವಾತಂ ನುಡಿಸಿದಂ. ಮುನಿ ಕುವರನಂ ತೊದಳ್ನುಡಿಯಂ ನುಡಿಸಿದಂ.

೧೮೯ ಅಶನ- ಬೋಧನ- ನಮಸ್ಕಾರಾರ್ಥಕಂಗಳಾದ ಧಾತು

---

(೧) ಪ್ರಯೋಜ್ಯಕರ್ತೃವೆಂದೊಡೆ ಸ್ವಾತಂತ್ರ್ಯವಿಲ್ಲದ (ಪರಾಧೀನ) ಕರ್ತೃ. ॥ ಪ್ರ ॥ ಗುರು ಬಂದಂ ಇಲ್ಲಿ ಗುರುಶಬ್ದಂ ಸ್ವತಂತ್ರ ಕರ್ತೃವಾಗಿದೆ. ಅರಸು ಗುರುವಂ ಬರಿಸಿದಂ—ಇಲ್ಲಿ ಗುರು ಅರಸನಿಂ ಪ್ರೇರಿತನಾದುದರಿಂದೆ ಪರತಂತ್ರಕರ್ತೃವೆಂದರಿವುದು.

ಗಳ ಸಂಬಂಧಿಗಳಾದ ಪ್ರಯೋಜ್ಯಕರ್ತೃವಿಂಗೆ ವಿಕಲ್ಪವಾಗಿ ದ್ವಿತೀಯಾವಿಭಕ್ತಿಯಪ್ಪುದು.

ಪ್ರಯೋಗಂ॥ ಅಶನಾರ್ಥಕ್ಕೆ—ತಂದೆ ಮಗನಂ ಪಾಲಂ ಕುಡಿಸಿದಂ. ತಂದೆ ಮಗನಿಂ ಪಾಲಂ ಕುಡಿಸಿದಂ. ಬೋಧನಾರ್ಥಕ್ಕೆ—ಗುರುಪಸುಳೆಯಂ ಪಳೆವಾತನೋದಿಸಿದಂ. ಗುರುಪಸುಳೆಯಿಂ ಪಳೆವಾತನೋದಿಸಿದಂ. ನಮಸ್ಕಾರಾರ್ಥಕ್ಕೆ—ಪಿತಂ ಪಸುಳೆಯಂ ಪಾರ್ವಂಗೆರಗಿಸಿದಂ. ಪಿತಂ ಪಸುಳೆಯಿಂ ಪಾರ್ವಂಗೆರಗಿಸಿದಂ.

೧೪೦ ಅನುಕ್ತವಾದ ಕರ್ತೃ (೧) ಕರಣ-ಕಾರಣವಾಚಕಂಗಳಾದ ಶಬ್ದಂಗಳ್ಗೆ (ಕರ್ತ್ರಾದ್ಯರ್ಥಂಗಳಲ್ಲಿ) ತೃತೀಯಾವಿಭಕ್ತಿಯಪ್ಪುದು. (ಕರಣಮೆಂದೊಡೆ ಕ್ರಿಯೆಗೆ ಸಾಧಕತಮವಾದುದು.)

ಪ್ರಯೋಗಂ॥ ಕರ್ತ್ರರ್ಥಕ್ಕೆ—ಕುಂಬರನಿಂ ಗಡಂ ಮಾಡಲ್ಪಟ್ಟುದು. ಕೃಷ್ಣನಿಂದರ್ಜುನನಿಂ ಕರ್ಣಂ ಕೊಲಿಸಲ್ಪಟ್ಟಂ. ಕರಣಾರ್ಥಕ್ಕೆ—ಕೊಡಲಿಯಿಂ ಕಡಿದಂ. ಬಾಣಿಂ ಸೀಳ್ದಂ. ಕಾರಣಾರ್ಥಕ್ಕೆ—ಪಂಡಿತರಿಂ ಸಭೆ ಮೆರೆವುದು. ಬಿಜ್ಜೆಯಿಂ ಸೊಗಮಪ್ಪುದು.

೧೪೧ ಏತರಿಂದೆ ಅಂಗವಿಕಾರಂ ತೋರ್ಪುದೋ ಅದರ್ಕೆ ತೃತೀಯಾವಿಭಕ್ತಿಯಪ್ಪುದು.

ಪ್ರಯೋಗಂ॥ ಕಣ್ಣಿಂ ಕುರುಡಂ. ಕಾಲಿಂ ಕುಂಟಂ.

೧೪೨ ಜ್ಞಾಪಕಾರ್ಥಕವಾದ ಶಬ್ದಕ್ಕೆ ತೃತೀಯಾವಿಭಕ್ತಿಯಪ್ಪುದು. (ಇದರ್ಕೆ ಇತ್ಥಂ ಭೂತಲಕ್ಷಣಮೆಂದು ಪೆಸರು.)

ಪ್ರಯೋಗಂ॥ ಕಮಂಡುಲುವಿಂತವಸಿಯನರಿದಂ. ಜಂಡಿಕೆಯಿಂ ವಟುವನರಿದಂ.

---

(೧) ಶ-ಶಾ-ಸಿದ್ಧಿಯುಂಟಾದೊಡೆ ಕಾಲಾಧ್ವವಾಚಕಶಬ್ದಂಗಳ್ಗೆ ವ್ಯಾಪ್ತಿತೋರಿದೊಡೆ ತೃತೀಯಾವಿಭಕ್ತಿಯಪ್ಪುದು. ಪ್ರ॥ ಮಾಸದಿಂ ವ್ಯಾಕರಣಂ ಪೂರ್ಣಮಾದುದು.

೧೫೩ ಸಹಾರ್ಥಕವಾದ ಶಬ್ದದೊಡನೆ ಯೋಗವುಳ್ಳ ಶಬ್ದಕ್ಕೆ ಬಹುಳವಾಗಿ ತೃತೀಯಾವಿಭಕ್ತಿಯಪ್ಪುದು. ಆದೊಡೆ ಒಡನೆ ಶಬ್ದದ ಯೋಗವಿರ್ದೊಡೆ ಬಾರದು.

ಪ್ರಯೋಗಂ॥ ಹರಿಸಿರಿಯಿಂಕೂಡಿ ಮೆರೆದಂ-ಗುರುಶಿಷ್ಯರಿಂ ಬೆರಸಿಬಂದಂ. ಗುರುಶಿಷ್ಯರ್ವೆರಸುಬಂದಂ.

೧೫೪ ಸಂಪ್ರದಾನ ವಾಚಕಕ್ಕೆ ಸಂಪ್ರದಾನಾರ್ಥದಲ್ಲಿ ಚತುರ್ಥೀವಿಭಕ್ತಿಯಪ್ಪುದು.

ಪ್ರಯೋಗಂ ॥ ಪಾರ್ವಂಗೆ ಆಕಳನಿತ್ತಂ ಗುರುಗೆ ದಕ್ಷಿಣೆಯಂ ಕೊಟ್ಟಂ.

೧೫೫ ಗಮನನಮನಾರ್ಥಕ ಧಾತುಗಳ ಕರ್ಮಕ್ಕೆ ಚತುರ್ಥೀ ವಿಭಕ್ತಿ ಯಪ್ಪುದು.

ಪ್ರಯೋಗಂ॥ ಕಾಡಿಂಗೆ ಪೋಪಂ. ಊರ್ಗೆತೆರಳ್ವಂ. ತಾಯ್ಗೆರಗಿದಂ ದೇವರ್ಗೆಮಣಿದಂ.

೧೫೬ ಅಸೂಯಾದ್ಯರ್ಥವುಳ್ಳ ಶಬ್ದಂಗಳ ಸಂಬಂಧಿಯಾದ ಪ್ರಾತಿಪದಿಕ (ಲಿಂಗ) ಕ್ಕೆ ಚತುರ್ಥೀ ವಿಭಕ್ತಿಯಪ್ಪುದು.

ಪ್ರಯೋಗಂ॥ ಶೌರಿಗೆ ಕಂಸನಸೂಯೆಗೆಯ್ವಂ. ಲೋಕಕ್ಕೆ ಬರಂ ಕೇಡಲ್ತೆ ಗಿಳಿಗೆ ಪಣ್ಣಿಪ್ಪವೊಲ್. ಜಗಕ್ಕೆಹರಿಪಿರಿಯಂ—ಕಬ್ಬಿಗಂಗೆ ಕೃಪಣಂ ಮುನಿವಂ. ಪಸುಳೆಗಿವನಪಕಾರಿಯಾದಂ, ಪುಲಿಗೆ ಪುಲ್ಲೆಯುಂಬುಗುಂ. ಸೆಟ್ಟಿತಿಗೆ ಸೆಟ್ಟಿತಿ ಪುರುಡಿಪಳ್. ಅಗಿಲ್ಗೆ ಸಿರಿಕಂಡಂ ದೊರೆಯಲ್ತೆ ಗರುಡಂಗೆ ಸೇಸಂ ಪಡಿಯಲ್ತೆ. ಪೆರೆಗೆ ಪೊಗಮೆಣೆಯಲ್ತೆ. ನಿನಗೆ ಪಣಮಂ (ಬಡ್ಡಿಗೀಯಲ್) ತಂದಿಹೆಂ. ಪಿಸುಣಂಗೆ ನೋಯಿಪುದು ಸಾಜಂ. ರಾವಣಂಗೆ ವಾಲಿ ಸಾಲ್ಗುಂ. ಪಿತೃಗಳ್ಗೆ ಸ್ವಧಾಕಾರಂ, ಅಗ್ನಿಗೆ ಸ್ವಾಹಾಕಾರಂ, ಇಂದ್ರಂಗೆ ವಷಟ್ಕಾರಂ

೧೪೭ ಆಶೀರ್ವಾದಾದ್ಯರ್ಥಂಗಳಲ್ಲಿ ಚತುರ್ಥೀ ವಿಭಕ್ತಿಯಪ್ಪುದು.

ಪ್ರಯೊಗಂ॥ ಗೋವಿಂ ಗೊಳ್ಳಿತಕ್ಕೆ. ಪ್ರಜೆಗಳ್ಗೆ ಸ್ವಸ್ತಿಯಕ್ಕೆ- ಉಂಗುರಕ್ಕೆ ಚಿನ್ನಂ ಸತ್ತಿಗೆಗೆ ಬೆತ್ತಂ. ಬರಕ್ಕೆ ಧೂಮಕೇತುಮೂಡಿತು. ಬಿರುವಿಕಲ್ಗೆ ಮಂಜುಸುರಿದುದು.

೧೪೮ ತಿರಸ್ಕಾರವು ತೋರಿದೊಡೆ ಜ್ಞಾನಾರ್ಥಕವಾದ ಧಾತುವಿನ ಕರ್ಮಕ್ಕೆ ವಿಕಲ್ಪವಾಗಿ ಚತುರ್ಥೀ ವಿಭಕ್ತಿ ಯಪ್ಪುದು.

ಪ್ರಯೋಗಂ ॥ ಹನುಮ ನಕ್ಷಕುಮಾರನಂ ಪುಲ್ಗೆ ಬಗೆದಂ-ಅಕ್ಷಕುಮಾರನಂ ಪುಲ್ಲಂ ಬಗೆದಂ. ಮಾರುತಿ ದುರ್ಯೋಧನನಂ ಪೆಣಂಗೆ ತಿಳಿದಂ—ದುರ್ಯೋಧನನಂ ಪೆಣನಂ ತಿಳಿದಂ.

೧೪೯ ಅಪಾದಾನಾರ್ಥದಲ್ಲಿ ಅಪಾದಾನ ವಾಚಕ ಶಬ್ದಕ್ಕೆ ಪಂಚಮೀ ವಿಭಕ್ತಿಯಪ್ಪುದು.

ಪ್ರಯೋಗಂ॥ ಮರದತ್ತಣಿಂ ಪಣ್ಣು ದಿರ್ದುದು. ಪುಲಿಯತ್ತಣಿಂದಳ್ಕಿದಂ. ಪಗೆಯುತ್ತಣಿಂ ಪೊರೆದಂ. ಬೆಟ್ಟನತ್ತಣಿಂ ನದಿಪುಟ್ಟುಗುಂ. ಕಿಚ್ಚಿನತ್ತಣಿಂ ಪೊಗೆಯಕ್ಕುಂ.

೧೫೦ ಸಂಬಂಧಾರ್ಥದಲ್ಲಿ ಸಂಬಂಧ ವಾಚಕ ಶಬ್ದಕ್ಕೆ ಷಷ್ಠೀವಿಭಕ್ತಿಯಪ್ಪುದು.

ಪ್ರಯೋಗಂ ॥ ಎಮ್ಮರಸಂ. ಅರಸಿನಮನೆ- ಗುರುವಿನಮಗಳ್- ಮರದಕೊಂಬು ಕಳಸದ ತಳಿರ್. ಊಟದಮನೆ. ಸೂರಮುಂದು. ತಾವರೆಯ ಬಂಡು. ದೇಶಾಂತರದಮಾತು. ಕಾಲದಸ್ಥಿತಿ.

೧೫೧ ಅಧಿಕರಣ ವಾಚಕಶಬ್ದಕ್ಕೆ ಅಧಿಕರಣಾ (ಆಧಾರ)ರ್ಥದಲ್ಲಿ ಸಪ್ತಮೀ ವಿಭಕ್ತಿಯಪ್ಪುದು.

ಪ್ರಯೋಗಂ || ಅಡವಿಯೊಳ್ ತಪಿಪರ್. ಪಾಸಿನೊಳ್ ಪವಡಿಪರ್

೧೬೨ ಸಾಧುಕುಶಲಾರ್ಥಕಂಗಳಾದ ಶಬ್ದಂಗಳೊಡನೆ ಸಂಬಂಧವುಳ್ಳ ಶಬ್ದಕ್ಕೆ ಸಪ್ತಮೀ ವಿಭಕ್ತಿಯಪ್ಪುದು.

ಪ್ರಯೋಗಂ || ತಾಯೊಳ್ ಸಾಧು. ಗುರುವೊಳೊಳ್ಳಿದಂ ಬಿಜ್ಜೆಯೊಳ್ ನಿಪುಣಂ. ಚಿತ್ರದೊಳ್ ಕುಶಲಂ.

೧೬೩ ನಿರ್ಧಾರಣ ( ನಿಶ್ಚಯಿಪುದು ) ದಲ್ಲಿ ಸಪ್ತಮೀವಿಭಕ್ತಿಯಪ್ಪುದು.

ಪ್ರಯೋಗಂ || ಪುರುಷರೋಳ್ ನೀತಿವಂತರುತ್ತಮರ್. ಸ್ತ್ರೀಯರೋಳ್ ಪತಿವ್ರತೆಯರ್ ಪುಣ್ಯವತಿಯರ್. ಪಶುಗಳೋಳ್ ಕಾರಾಕಳೊಳ್ಳಿತು. ಬಟ್ಟೆಗಳೊಳ್ ಬೆಳ್ವಟ್ಟೆಯುತ್ತಮಂ. ಓಡುವರೋಳ್ ದೃಢಾಂಗಂ ಬಲ್ಲಿದಂ. ಪರ್ಬುವುದರೋಳ್ ಗಾಳಿಯೊಳ್ಳಿತು.

## ವಿ ಭ ಕ್ತಿ ಪ ಲ್ಲ ಟ ಂ. *

೧೬೪ 1 ಸಪ್ತಮ್ಯರ್ಥದಲ್ಲಿ ಪ್ರಥಮಾವಿಭಕ್ತಿಯುಂ 2 ತೃತೀಯಾ ಪಂಚಮ್ಯರ್ಥಂಗಳಲ್ಲಿ ದ್ವಿತೀಯಾ ವಿಭಕ್ತಿಯುಂ 3 ಪಂಚಮ್ಯರ್ಥದಲ್ಲಿ ತೃತೀಯಾ ವಿಭಕ್ತಿಯುಂ 4 ದ್ವಿತೀಯಾ ಷಷ್ಠೀ ಸಪ್ತಮೀ ವಿಭಕ್ತ್ಯರ್ಥಂಗಳಲ್ಲಿ ಚತುರ್ಥೀ ವಿಭಕ್ತಿಯುಂ 5 ಪ್ರಥಮಾ

---

* ಶ, ಶಾ ೧ ದ್ವಿತೀಯಾ ವಿಭಕ್ತ್ಯರ್ಥದಲ್ಲಿ ಪ್ರಥಮಾ ವಿಭಕ್ತಿಯುಂ ೨ ಪ್ರಥಮಾ ಚತುರ್ಥೀವಿಭಕ್ತಿಗಳಲ್ಲಿ ದ್ವಿತೀಯಾ ವಿಭಕ್ತಿಯುಂ. ೩ ದ್ವಿತೀಯಾ ತೃತೀಯಾ ವಿಭಕ್ತ್ಯರ್ಥಂಗಳಲ್ಲಿ ಪಂಚಮೀ ವಿಭಕ್ತಿಯುಂ ಬಹುಳವಾಗಿ ಅಪ್ಪುವು ಪ್ರ || ೧ ಘಟಂ ಮಾಡಿದಂ-ಘಟಮಂ ಮಾಡಿದಂ ೨ ದೇವದತ್ತನನಿರ್ದಂ-ದೇವದತ್ತನಿರ್ದಂ. ಲೋಕಮನಧಿಕಂ-ಲೋಕಕಧಿಕಂ. ೩ ಆತನತ್ತಣಿಂ ಬೆಸಗೊಂಡಂ-ಆತನಂ ಬೆಸಗೊಂಡಂ. ಕೊಡಯುಲಿತ್ತಣಿಂಕಡಿದಂ-ಕೊಡಲಿಯಿಂ ಕಡಿದಂ.

ದ್ವಿತೀಯಾ ಸಪ್ತಮ್ಯರ್ಥಂಗಳಲ್ಲಿ ಷಷ್ಠೀವಿಭಕ್ತಿಯುಂ 6 ತೃತೀಯಾರ್ಥದಲ್ಲಿ ಸಪ್ತಮೀ ವಿಭಕ್ತಿಯುಂ ಬಹುಳವಾಗಿ ಅಪ್ಪುವು.

ಪ್ರಯೋಗಂ ॥ 1 ಮುನಿಯೊಂದುದಿನಂ ಬಂದನು ಮುನಿಯೊಂದು ದಿನದೊಳ್ ಬಂದನು. 2 ಪೂವಿಂದರ್ಚಿಸಿದಂ—ಪೂವನರ್ಚಿಸಿದಂ. ಮನೆಯಂಪೊರಮಟ್ಟಂ ಮನೆಯತ್ತಣಿಂ ಪೊರಮಟ್ಟಂ. 3 ಮನೆಯಿಂ ಪೊರಮಟ್ಟಂ-ಮನೆಯತ್ತಣಿಂ ಪೊರಮಟ್ಟಂ. 4 ಶಿಷ್ಯಂಗೆ ಬೋಧಿಸಿದಂ-ಶಿಷ್ಯನಂ ಬೋಧಿಸಿದಂ ನೆಲಕ್ಕೆರೆಯುಂ-ನೆಲದೆರೆಯುಂ ಎಳ್ಗೆಣ್ಣೆ-ಎಳ್ಳೊಳೆಣ್ಣೆ. 5 ಗಾಂಗೆಯರ ಪೇಳ್ದತೆರಂ ಗಾಂಗೆಯರ್ ಪೇಳ್ದತೆರಂ. ದೇವರ ಪೊಗಳ್ವೆಲ್-ದೇವರಂಪೊಗಳ್ವೆಲ್. ಎಳ್ಳೆಣ್ಣೆ-ಎಳ್ಳೊಳೆಣ್ಣೆ. 6 ಕೊಡಲಿಯೊಳ್ ಕಡಿದಂ-ಕೊಡಲಿಯಿಂ ಕಡಿದಂ.

ಇಂತು ನಾಮಪ್ರಕರಣಂ ಮುಗಿದುದು.

---

## ಕೃಲ್ಲಿಂಗಪ್ರಕರಣಂ.

೧೬೫ ಧಾತುಗಳ್ ಕರ್ತ್ರರ್ಥದಲ್ಲಾದೊಡಂ, ಕರ್ಮಾರ್ಥದಲ್ಲಾದೊಡಂ * ತಿಙ್ಪ್ರತ್ಯಯಮಂ ಪಡೆಯದೆ, ದ-ದಪ-ವ-ಪ ಮೊದಲಾದ ಕೃತ್ ಪ್ರತ್ಯಯಂಗಳೊಡನೆ ಕೂಡಿದೊಡೆ ಕೃಲ್ಲಿಂಗಂಗಳೆನಿಪ್ಪುವು. (ಕೃತ್ಪ್ರತ್ಯಯಂಗಳ್ ಕರ್ತೃ ಕರ್ಮ ಭಾವಾರ್ಥಂಗಳಲ್ಲಿ ಧಾತುಗಳ್ಗೆ ಸೇರುವುವು.)

ಪ್ರಯೋಗಂ ॥ ಕರ್ತ್ರರ್ಥದಲ್ಲಿ—ನೋಡಿದ- ತೋಱಿದ- ತೋಱದ- ನೋಡಿದಪ- ತೋಱಿದಪ- ನೋಡುವ- ತೋಱುವ—ನೋಳ್ಪ- ತೋರ್ಪ. ಕರ್ಮಾರ್ಥದಲ್ಲಿ—ನೋಡಲ್ಪಟ್ಟ-ತೋಱಲ್ಪಟ್ಟ-ನೋಡಲ್ಪಟ್ಟಪ-

---

* ತಿಙ್ ಪ್ರತ್ಯಯಂಗಳ್ = ಪ್ರಥಮ ಮಧ್ಯಮೋತ್ತಮಪುರುಷ ಪ್ರತ್ಯಯಂಗಳ್.

ತೋಱಲ್‌ಪಟ್ಟಪ, ನೋಡಲ್ಪಡುವ-ತೋಱಲ್ಪಡುವ-ನೋಡಲ್ಪಡದ.

೧೬೬ ಉದು-ವುದುಪ್ರತ್ಯಯಾಂತಗಳಾದ ಧಾತುಗಳ್‌ ಕೃಲ್ಲಿಂಗಂಗಳೆನಿಪ್ಪುವು.

ಪ್ರಯೋಗಂ ॥ ಮಾಡಿದುದು-ಮಾಡಲ್ಪಟ್ಟದು-ಮಾಡಿದಪ್ಪುದು-ಮಾಡಲ್ಪಟ್ಟಪ್ಪುದು-ಮಾಳ್ಪುದು. ಮಾಡುವುದು-ಮಾಡಲ್ಪಡುವುದು-ಕಾವುದು-ಈವುದು-ಮೇವುದು-ಕೋವುದು- ನೇಯ್ವುದು-ಆರ್ಪುದು-ಮೆಲ್ವುದು-ಕೇಳ್ವುದು. ಮಾಡದುದು-ಮಾಡಲ್ಪಡದುದು-ಕಾಯದುದು-ಈಯದುದು-

ಇಲ್ಲಿಂದೆ ಮುಂದೆಪೇಳಲ್ಪಡುವ ಕಾರ್ಯಂಗಳ್‌ ಭಾವಾರ್ಥದಲ್ಲಿ ಬಹುಳವಾಗಿ ಬರ್ಪುವು. (ಭಾವವೆಂದರೆ ಧಾತುವಿನ ಶುದ್ಧವಾದರ್ಥವು).

೧೬೭ ಸಾಲ್‌ ಧಾತುಗೆ ಅ ಪ್ರತ್ಯಯಮುಂ ಒಲ್‌ ಮೊದಲಾದ ಧಾತುಗಳ್ಗೆ ಅವು ಪ್ರತ್ಯಯಮುಂ ಬರ್ಪುವು.

ಪ್ರಯೋಗಂ ॥ ಸಾಲ್‌ + ಅ = ಸಾಲಂ. ಒಲ್‌ + ಅವು = ಒಲವು-ಬರವು-ಒಳವು-ಕಳವು-ನೊಳವು ಮೊದಲಾದುವು.

೧೬೮ ತೆರೆ, ಪೊಳೆ. ಧಾತುಗಳ ಕಡೆಯಸ್ವರಕ್ಕೆ ಆದೇಶವಾಗಿ ಅಪು ಪ್ರತ್ಯಯವಪ್ಪುದು. ಪ್ರಯೋಗಂ ॥ ತೆರಪು-ಪೊಳಪು.

೧೬೯ ಕಱ ಮೊದಲಾದ ಧಾತುಗಳ ಕಡೆಯಸ್ವರಕ್ಕೆ ಆದೇಶವಾಗಿ ಅವು ಪ್ರತ್ಯಯಂ ಬರ್ಪುದು.

ಪ್ರಯೋಗಂ ॥ ಕಱ + ಇವು = ಕಱವು. ನೆಱವು. ಸೆಱವು. ಮೊದಲಾದವು.

೧೭೦ ಬಳೆ-ಬೆಳೆ ಧಾತುಗಳ ಕಡೆಯ ಸ್ವರಕ್ಕೆ ಕ್ರಮ

ವಾಗಿ ಅವಿ-ಅಸು ಎಂಬ ಪ್ರತ್ಯಯಂಗಳಾದೇಶವಾಗಿಬರ್ಪುವು.

ಪ್ರಯೋಗಂ ॥ ಬಳೆ + ಅವಿ = ಬಳವಿ. ಬೆಳಸು.

೧೭೧ ಪೊಲ್ ಧಾತುವಿಂಗೆ ಅಸು ಪ್ರತ್ಯಯಮಪ್ಪುದು.

ಪ್ರಯೋಗಂ ॥ ಪೊಲಸು.

೧೭೨ ಷಟ್ಪದಿಗಳಲ್ಲಿ ಆಳ್ ಮೊದಲಾದ ಧಾತುಗಳ್ಗೆ ವಿಕಲ್ಪವಾಗಿ ಇಕೆ ಪ್ರತ್ಯಯಂ ಬರ್ಪುದು.

ಪ್ರಯೋಗಂ ॥ ಆಳಿಕೆ-ತಾಳಿಕೆ-ಪೇಳಿಕೆ-ಪೋಲಿಕೆ-ಬಾಳಿಕೆ-ಆಳ್ಕೆ ತಾಳ್ಕೆ-ಪೇಳ್ಕೆ-ಪೋಲ್ಕೆ-ಬಾಳ್ಕೆ.

೧೭೩ * ಅಂಜು ಮೊದಲಾದ ಧಾತುಗಳ ಕಡೆಯಸ್ವರಕ್ಕೆ ಆದೇಶವಾಗಿ ಇಕೆ ಪ್ರತ್ಯಯಂ ಬರ್ಪುದು.

ಪ್ರಯೋಗಂ ॥ ಅಂಜಿಕೆ-ಓದಿಕೆ-ಪೊಂದಿಕೆ-ನಂಬಿಕೆ.

೧೭೪ (೧) ಕಲ್ ಧಾತುಗೆ ಇಕೆ ಪ್ರತ್ಯಯಮುಂ ಪೊಲ್ ಧಾತುವಿಂಗೆ ಇಗೆ ಪ್ರತ್ಯಯಮುಂ ಬರ್ಪುವು.

ಪ್ರಯೋಗಂ ॥ ಕಲಿಕೆ-ಪೊಲಿಗೆ.

೧೭೫ ಮೂಡುಮೊದಲಾದ ಧಾತುಗಳ ಕಡೆಯಸ್ವರಕ್ಕೆ ಆದೇಶವಾಗಿ ಇಗೆ ಪ್ರತ್ಯಯಂಬರ್ಪುದು.

ಪ್ರಯೋಗಂ ॥ ಮೊಡಿಗೆ-ಬೇಡಿಗೆ-ಉಡಿಗೆ-ಅಡಿಗೆ.

೧೭೬ ಉಣ್-ತಿನ್, ಧಾತುಗಳ್ಗೆ ಇಸು ಪ್ರತ್ಯಯಂಬರ್ಪುದು.

---

* ಶ. ಶಾ. ಮೋದು ಮೊದಲಾದ ಧಾತುಗಳ್ಗೆ ವಿಕಲ್ಪವಾಗಿ ಇಕೆ ಪ್ರತ್ಯಯಮಕ್ಕುಂ. ಪ್ರಯೋಗಂ ॥ ಮೋದಿಕೆಗಳ್-ಮೋದುಗಳ್-ಓದಿಕೆಗಳ್-ಓದುಗಳ್

(೧) ಷಟ್ಪದಿಯಲ್ಲಿ ಕಲ್ ಧಾತು ಇಕಾರಾಂತಮಾಗಿಯುಂ ಇರ್ಪುದು

ಪ್ರಯೋಗಂ ॥ ಉಣಿಸು-ತಿನಿಸು.

೧೬೭ ಮುಳಿ ಧಾತುವಿನ ಕಡೆಯಸ್ವರಕ್ಕೆ ಆದೇಶವಾಗಿ ಇಸು ಪ್ರತ್ಯಯಂಬರ್ಪುದು. ಪ್ರಯೋಗಂ ॥ ಮುಳಿಸು.

೧೬೮ ಕೊಲ್ ನಗು ಧಾತುಗಳ್ಗೆ ಎ ಪ್ರತ್ಯಯಮುಂ ನಗು ಧಾತುವಿನ ಕಡೆಯಸ್ವರಕ್ಕೆ ಲೋಪಮುಂ ಅಪ್ಪುದು.

ಪ್ರಯೋಗಂ ॥ ಕೊಲೆ-ನಗೆ.

೧೬೯ (೧) ಕಿಡು ಧಾತುವಿನ ಆದಿಸ್ವರಕ್ಕೆ ಏಕಾರಾದೇಶ ವಪ್ಪುದು. ಪ್ರಯೋಗಂ ॥ ಕೇಡು.

೧೭೦ ನ-ಣ-ಲ-ಯ ರೇಫಾಂತಂಗಳಾದ ಧಾತುಗಳ್ಗಂ ದೀರ್ಘವಾದ ಏಕಸ್ವರವುಳ್ಳ ಳ ಕಾರಾಂತ ಧಾತುಗಂ ಕೆ ಪ್ರತ್ಯಯಂ ಬರ್ಪುದು.

ಪ್ರಯೋಗಂ ॥ ಅನ್ಕೆ-ಪೇನ್ಕೆ-ಕಾಣ್ಕೆ-ಪೂಣ್ಕೆ-ಸೋಲ್ಕೆ-ಪೋಲ್ಕೆ-ಆರಯ್ಕೆ-ಆಯ್ಕೆ-ಪೊಣರ್ಕೆ-ತೋರ್ಕೆ-ಬಾಳ್ಕೆ-ಪೇಳ್ಕೆ.

೧೭೧ (೨) ನಂಬುಮೊದಲಾದ ಧಾತುಗಳ್ಗೆ ಗೆ ಪ್ರತ್ಯಯಂ ಬರ್ಪುದು.

ಪ್ರಯೋಗಂ ॥ ನಂಬುಗೆ-ಪಸುಗೆ-ಉಡುಗೆ-ತುಡುಗೆ-ಬೀಗೆ-ಸೇಯ್ಗೆ ಏಳ್ಗೆ-ಬೇಳ್ಗೆ ಮೊದಲಾದವು. ಸೂ. ೧೭೪

---

(೧) ಶ-ಶಾ, ತುಡು-ಕುಡು ಧಾತುಗಳ ಆದಿಸ್ವರಕ್ಕೆ ಓಕಾರಾದೇಶ ವಪ್ಪುದು. ಪ್ರಯೋಗಂ॥ ತೋಡು-ತೋಡುಗಳ್. ಕೋಡು-ಕೋಡುಗಳ್ ತೋಡು = ತೊಟ್ಟುಗೊಳ್ಳುವುದು, ಕೋಡು = ದಾನವೊಡುವುದು ಶಮ ದಲ್ಲಿ ಕೊಡದಿರಿಂದ ರಾದರ್, ಶ, ಶಾ, ತೋಡು ಎಂದುಂಟು.

(೨) ಶ-ಶಾ, ಪೊಯ್ ಬಯ್ ಧಾತುಗಳ್ಗೆ ಗುಳ್, ಪ್ರತ್ಯಯಂ ಬರ್ಪುದು. ಪ್ರ॥ ಪೊಯ್ಗುಳ್-ಪೊಯ್ಗುಳ್ಗಳ್-ಬಯ್ಗುಳ್-ಬಯ್ಗುಳ್ಗಳ್-

೧೮೨ ದೀರ್ಘೋಪಧಿಯಾದ ಆಡು ಮೊದಲಾದ ಧಾತುಗಳ ಡು ಶಬ್ದಕ್ಕೆ ಟ ಶಬ್ದಾದೇಶವಪ್ಪುದು.

ಪ್ರಯೋಗಂ ॥ ಆಟಂ-ಪಾಟಂ-ನೋಟಂ-ಓಟಂ-ಕಾಟಂ.

೧೮೩ ಕುಣಿ ಮೊದಲಾದ ಧಾತುಗಳ್ಗೆ ತಪ್ರತ್ಯಯಂಬರ್ಪುದು

ಪ್ರಯೋಗಂ ॥ ಕುಣಿತಂ-ಅರಿತಂ ಪೊಡೆತಂ-ಗೆಯ್ತಂ.

೧೮೪ ಅಗಿ-ಉಗು-ಪುಗು-ಮಿಗು ಧಾತುಗಳ್ಗೆ ತೆ ಪ್ರತ್ಯಯಂ ಬರ್ಪುದು. ಪ್ರಯೋಗಂ ॥ ಅಗಿತೆ-ಉಗುತೆ-ಪುಗುತೆ ಮಿಗುತೆ.

೧೮೫ ಅನೇಕಸ್ವರವುಳ್ಳ ಳಕಾರಾಂತ ಧಾತುಗಳ್ಗೆ ತೆ,ಪ್ರತ್ಯಯಂಬರ್ಪುದು. ಪ್ರಯೋಗಂ ॥ ಪೊಗಳ್ತೆ-ನೆಗಳ್ತೆ ಮೊದಲಾದುವು.

೧೮೬ ತಳಿ ಮೊದಲಾದ ಧಾತುಗಳ್ಗೆ ಪ ಪ್ರತ್ಯಯಂ ಬರ್ಪುದು. ಪ್ರಯೋಗಂ ॥ * ತಳಿಪಂ-ತಿಳಿಪಂ ಬರೆಪಂ-ಕಡೆಪಂ.

೧೮೭ ನೋನ್ ಧಾತುಗೆ ಪಿ ಪ್ರತ್ಯಯಂ ಬರ್ಪುದು.

ಪ್ರಯೋಗಂ॥ ನೋಂಪಿ

೧೮೮ (೧) ಓ-ಕಾ-ಮೇ-ಬೆಳರ್ ಧಾತುಗಳ್ಗೆ ಪುಪ್ರತ್ಯಯಂ ಬರ್ಪುದು. ಪ್ರ॥ ಓಪು-ಕಾಪ್ರು-ಮೇಪು-ಬೆಳರ್ಪು.

೧೮೯ (೨) ಬಲ್ ಮೊದಲಾದ ಧಾತುಗಳ್ಗೆ ಪುಪ್ರತ್ಯಯಂ ಬರ್ಪುದು.

---

* ಶ-ಶಾ, ಎಕಾರಾಂತವಾದ ಧಾತುಗಳ್ಗೆ ಪಪ್ರತ್ಯಯಂ ಬರ್ಪುದು. ಪ್ರಯೋಗಂ॥ ತೆಗೆಪಂ ತಗೆಪಂ ಪೊಳಗು ಧಾತುವಿನ ಗು ಶಬ್ದಕ್ಕೆ ಆದೇಶವಾಗಿ ಪುಪ್ರತ್ಯಯಂ ಬರ್ಪುದು. ಪ್ರ ॥ ಪೊಳಪು. (೧) ನೆನೆಧಾತುವಿನ ಅಂತ್ಯಸ್ವರಕ್ಕೆ ಅಕಾರಾದೇಶವಪ್ಪುದು.

(೨) ಶ,ಶಾ ತರ್-ಬರ್ ಧಾತುಗಳ್ಗೆ "ಕುಮೆ" ಪ್ರತ್ಯಯಂ ಬರ್ಪುದು. ಪ್ರಯೋಗಂ॥ ತರ್ಕುಮೆ-ಬರ್ಕುಮೆ.

ಒಲ್ ಮೊದಲಾದ ಧಾತುಗಳ್ಗೆ ಮೆ ಪ್ರತ್ಯಯಮಪ್ಪುದು.

ಪ್ರಯೋಗಂ॥ ಬಲ್ಮೆ- ಒಲ್ಮೆ-ನಲ್ಮೆ-ಕೂರ್ಮೆ ಗೆಯ್ಮೆ.

೧೯೦ ಸಾ ಮೊದಲಾದ ಧಾತುಗಳ್ಗೆ ವುಪ್ರತ್ಯಯಂ ಬರ್ಪುದು. ಪ್ರಯೋಗಂ॥ ಸಾವು-ಪಸಿವು-ಮೇವು-ನೋವು

೧೯೧ ಕಿನಿ ಮೊದಲಾದ ಧಾತುಗಳ್ಗೆ ಸುಪ್ರತ್ಯಯಂ ಬರ್ಪುದು. ಪ್ರಯೋಗಂ॥ ಕಿನಿಸು—ಮುನಿಸು-ಮುಳಿಸು.

೧೯೨ (೧) ಮಿಾಧಾತುವಿಂಗೆ ಹಪ್ರತ್ಯಯಂ ಬರ್ಪುದು.

ಪ್ರಯೋಗಂ॥ ಮಿಾಹಂ.

ಉಳಿದುವಂ ಮಹಾಕವಿಪ್ರಯೋಗದಿಂ ತಿಳಿವುದು.

---

## ತದ್ಧಿತಪ್ರಕರಣಂ.

ಈಪ್ರಕರಣದಲ್ಲಿ ಪ್ರಕೃತಿ ಪ್ರತ್ಯಯಂಗಳ್ಗೆ "ಸಮಾಸದಲ್ಲಿ ಪೂರ್ವೋತ್ತರಪದಂಗಳ್ಗೆ ಬರ್ಪಕಾರ್ಯಂಗಳ್" ಬಹುಳವಾಗಿ ಬರ್ಪುವು ಪ್ರತ್ಯಯಾದ್ಯಕ್ಷರವು ಕಕಾರವಲ್ಲದೊಡೆ ತೃತೀಯ ವರ್ಣಾದೇಶವಿಲ್ಲ.

೧೯೩. ಪೂಜಿಸುವನೆಂಬರ್ಥದಲ್ಲಿ ದೇವಶಬ್ದದ ಅಕಾರಕ್ಕೆ ಆದೇಶವಾಗಿ ಅಡಿಗಪ್ರತ್ಯಯವಪ್ಪುದು.

ಪ್ರಯೋಗಂ॥ ದೇವರಂ ಪೂಜಿಸುವಂ ದೇವಡಿಗಂ.

೧೯೪ ಪುಟ್ಟಿದನೆಂಬರ್ಥದಲ್ಲಿ ದಿಗ್ವಾಚಕ ಶಬ್ದಕ್ಕೆ ಅಣ ಎಂಬ ಪ್ರತ್ಯಯವಪ್ಪುದು.

ಪ್ರಯೋಗಂ॥ ಮೂಡಣ ದಿಕ್ಕಿನೋಳ್ ಪುಟ್ಟಿದವಂ-ಮೂಡಣಂ-ಪಡುವಣಂ.

೧೯೫ ಪೂರಣಾರ್ಥದಲ್ಲಿ ಸಂಖ್ಯಾ, ಪರಿಮಾಣ ವಾಚಕಂಗ

---

(೧) ಶ-ಶಾ, ಬಾಧಾತುವಿಂಗೆ ಹು ಪ್ರತ್ಯಯಂ ಬರ್ಪುದು. ಪ್ರಯೋಗಂ॥ ಬಾಹು.

ಳ್ಗೆ ಅನೆಯ ಪ್ರತ್ಯಯವುಂ ವೇಳಾರ್ಥದಲ್ಲಿ ಮೆ ಪ್ರತ್ಯಯವುಂ ಅ ಪ್ಪುವು.

ಪ್ರಯೋಗಂ ॥ ಸಂಖ್ಯಾವಾಚಕಕ್ಕೆ-ಒಂದನೆಯುಂ, ಎರಡನೆಯುಂ. ಪರಿಮಾಣ ವಾಚಕಕ್ಕೆ-ಅನಿತನೆಯುಂ-ಇನಿತನೆಯುಂ. ವೇಳಾರ್ಥಕ್ಕೆ-ಒರ್ಮೆ ಇರ್ಮೆ.

೧೯೬ ಸ್ವಭಾವವೆಂಬ ಅರ್ಥದಲ್ಲಿ ಓದು ಮೊದಲಾದ ಶಬ್ದಂಗ ಳ್ಗೆ "ಆಳಿ" ಪ್ರತ್ಯಯವಪ್ಪುದು.

ಪ್ರಯೋಗಂ ॥ ಓದುವುದು ಸ್ವಭಾವವಿಾತಂಗೆ= ಓದಾಳಿ. ಜೂದಾಳಿ.

೧೯೭ ಅಧಿಕಾರವುಳ್ಳ ಎಂಬ ಅರ್ಥದಲ್ಲಿ ಸೂಳ್ ಮೊದಲಾದ ಶಬ್ದಂಗಳ್ಗೆ "ಆಯ್ತ" ಪ್ರತ್ಯಯ ವಪ್ಪುದು.

ಪ್ರಯೋಗಂ॥ ಸೂಳಾಯ್ತಂ. ಕಲ್ಲಾಯ್ತಂ.

೧೯೮ ಭಾವಾರ್ಥದಲ್ಲಿ ಮಾನಸ ಮೊದಲಾದ ಶಬ್ದಂಗಳ್ಗೆ "ಇಕೆ" ಪ್ರತ್ಯಯವಪ್ಪುದು.

ಪ್ರಯೋಗಂ॥ ಮಾನಸಿಕೆ-ಗರುವಿಕೆ.

೧೯೯ ವ್ಯಾಪಾರಿ ಎಂಬರ್ಥದಲ್ಲಿಯುಂ ಮಾಡುವ ನೆಂಬರ್ಥದ ಲ್ಲಿಯುಂ--ಆಚರಿಸುವ ನೆಂಬರ್ಥದಲ್ಲಿಯುಂ—ಪಂಡಿತನೆಂಬರ್ಥದಲ್ಲಿ ಯುಂ-ಓದುವನೆಂಬರ್ಥದಲ್ಲಿಯುಂ-ಜೀವಿಸುವ ನೆಂಬರ್ಥದಲ್ಲಿಯುಂ ಯೋಗವುಳ್ಳವನೆಂಬರ್ಥದಲ್ಲಿಯುಂ-ತೆಂಬುಲ ಮೊದಲಾದ ಶಬ್ದಂಗ ಳ್ಗೆ (೧) ಇಗ ಪ್ರತ್ಯಯಂಬಪ್ಪುದು.

---

(೧) ಶ-ಶಾ, ಪುಟ್ಟಿದನೆಂಬರ್ಥದಲ್ಲಿ ಇಗ ಉಗ ಪ್ರತ್ಯಯಂಗಳಪ್ಪುವು ಪ್ರ॥ಕಾಲೂರೊಳ್ ಪುಟ್ಟಿದಂ—ಕಾಲೂರಿಗಂ. ಪೆಣ್ಣುಗಂ. ಮಣ್ಣುಗಂ.

ಪ್ರಯೋಗಂ || ತಂಬುಲದ ವ್ಯಾಪಾರಿಯಿವಂ = ತಂಬುಲಿಗಂ. ದೂಸಿಗಂ. ಸರವಂ ಮಾಡುವಂ = ಸರವಂದಿಗಂ. ಕಬ್ಬಿಗಂ. ವ್ರತಮಂ ಆಚರಿಸುವಂ = ವ್ರತಿಗಂ. ವ್ರುಸಿಗಂ. ಲೆಕ್ಕದೋಳ್ ಪಂಡಿತಂ = ಲೆಕ್ಕಿಗಂ. ಸಿದ್ಧಾಂತಿಗಂ. ಜೋಯಿಸ ಮನೋದುವಂ = ಜೋಯಿಸಿಗಂ. ಶಾಸ್ತ್ರಿಗಂ. ಗಾಣದಿಂ ಜೀವಿಸುವಂ = ಗಾಣಿಗಂ ದವಸಿಗಂ. ಸುಂಕದ ಯೋಗವುಳ್ಳವಂ = ಸುಂಕಿಗಂ. ಬಾಗಿಲಿಗಂ.

೨೦೦ ಪುಟ್ಟಿದನೆಂಬರ್ಥದಲ್ಲಿ ಅಲರ್ ಮೊದಲಾದ ಶಬ್ದಂಗಳ್ಗೆ "ಇಚ" ಪ್ರತ್ಯಯವಪ್ಪುದು.

ಪ್ರಯೋಗಂ|| ಅಲರೋಳ್ ಪುಟ್ಟಿದಂ = ಅಲರಿಚಂ. ಪೊಳಲಿಚಂ.

೨೦೧ ಭುಂಜಿಪ್ಪುದು ಸ್ವಭಾವಮೆಂಬರ್ಥದಲ್ಲಿ ಎಲರ್ ಮೊದಲಾದ ಶಬ್ದಂಗಳ್ಗೆ "ಉಣಿ" ಪ್ರತ್ಯಯಮಕ್ಕುಂ.

ಪ್ರಯೋಗಂ || (ಬಂಡನುಣ್ಬುದು ಸ್ವಭಾವಂ = ಬಂಡುಣಿ)ಎಲರುಣಿ

೨೦೨ ಗುಣವಾಚಕಶಬ್ದಕ್ಕೆ ಉಳ್ಳವನೆಂಬರ್ಥದಲ್ಲಿ "ಕ" ಪ್ರತ್ಯಯವಪ್ಪುದು.

ಪ್ರಯೋಗಂ|| ಕರಿದುಂಟು ಈತನೋಳ್ = ಕರಿಕಂ. ಬಿಳಿಕಂ.

೨೦೩ ಉಳ್ಳವನೆಂಬರ್ಥದಲ್ಲಿ ಕೆಚ್ಚನೆ ಶಬ್ದಕ್ಕೆ "ಚ" ಪ್ರತ್ಯಯವಪ್ಪುದು. ಪ್ರಯೋಗಂ|| ಕೆಂಪುಳ್ಳವಂ = ಕೆಂಚಂ.

೨೦೪ ಸ್ವಭಾವವಾಗಿ ಉಳ್ಳವನೆಂಬರ್ಥದಲ್ಲಿಯುಂ-ಶೂರನೆಂಬರ್ಥದಲ್ಲಿಯುಂ ಕಾರಪ್ರತ್ಯಯವಪ್ಪುದು.

ಪ್ರಯೋಗಂ|| ನಗೆಸ್ವಭಾವವಾಗಿ ಉಳ್ಳವಂ = ನಗೆಗಾರಂ. ನಸೆಗಾರಂ. ನುಡಿಯೋಳ್ ಶೂರಂ ನುಡಿಕಾರಂ ಮೋಸಗಾರಂ.

೨೦೫ ಕುಟ್ಟುವನೆಂಬರ್ಥದಲ್ಲಿ ಕಲ್ ಮೊದಲಾದ ಶಬ್ದಂಗಳ್ಗೆ "ಕುಟಿಗ" ಪ್ರತ್ಯಯಮಪ್ಪುದು.

ಪ್ರಯೋಗಂ || ಕಲ್ಲಂ ಕುಟ್ಟುವಂ= ಕಲ್ಲುಟಿಗಂ. ಮರಗುಟಿಗಂ.

೨೦೬ ಕೊಲ್ವನೆಂಬರ್ಥದಲ್ಲಿ ಹಾವು ಮೊದಲಾದ ಶಬ್ದಂಗಳ್ಗೆ ‹.ಕುಲಿ,‹ ಪ್ರತ್ಯಯುವಪ್ಪುದು,

ಪ್ರಯೋಗಂ|| ಪಾವಂ ಕೊಲ್ವಂ= ಪಾವುಗುಲಿ ಮಿಾಂಗುಲಿ.

೨೦೭ ಜೀವಿಸುವನೆಂಬರ್ಥದಲ್ಲಿ ಲಂಚ ಮೊದಲಾದ ಶಬ್ದಂಗಳ್ಗೆಗ ವಣಿಗ ಪ್ರತ್ಯಯಂಗಳಪ್ಪುವು.

ಪ್ರಯೋಗಂ || ಲಂಚದಿಂ ಜೀವಿಸುವಂ = ಲಂಚಗಂ–ಲಂಚವಣಿಗಂ, ಮಾತುಗಂ-ಮಾತುವಣಿಗಂ.

೨೦೮ (೧) ಮಾಡುವನೆಂಬರ್ಥದಲ್ಲಿ ಬಳೆ ಮೊದಲಾದ ಶಬ್ದಂಗಳ್ಗೆ "ಗಾರ" ಪ್ರತ್ಯಯುಮಪ್ಪುದು.

ಪ್ರಯೋಗಂ|| ಬಳೆಯುಂ ಮಾಡುವಂ = ಬಳೆಗಾರಂ. ಕಂಚುಗಾರಂ.

೨೦೯ ಕೊಳ್ವನೆಂಬರ್ಥದಲ್ಲಿ ಲಂಚ ಮೊದಲಾದ ಶಬ್ದಂಗಳ್ಗೆ "ಗುಳಿ" ಪ್ರತ್ಯಯುವಪ್ಪುದು.

ಪ್ರಯೋಗಂ|| ಲಂಚಮಂ ಕೊಳ್ವಂ (*) ಲಂಚಂಗುಳಿ ಸಾಲಂಗುಳಿ.

೨೧೦ ಭಾವಾರ್ಥದಲ್ಲಿ ವೀರ ಮೊದಲಾದ ಶಬ್ದಂಗಳ್ಗೆ ‹,ತನ,› ಪ್ರತ್ಯಯುವಪ್ಪುದು.

ಪ್ರಯೋಗಂ || ವೀರನಭಾವಂ= ವೀರತನಂ. ಬಲ್ಲತನಂ.

೨೧೧ ಇಕಾರಾಂತವಾದ ದಿಗ್ವಾಚಕಶಬ್ದಂಗಳ್ಗೆ ಪುಟ್ಟದ

---

(೧) ಶ-ಶಾ, ಮಾಡುವನೆಂಬರ್ಥದಲ್ಲಿ ಉಳಿಗಪ್ರತ್ಯಯುವಪ್ಪುದು. ಪ್ರ|| ದೇವರ ಮಾಡುವಂ= ದೇವುಳಿಗಂ.

* ಅಕಾರಾಂತ ಶಬ್ದಕ್ಕೆ ಗುಳಿ, ಬೊಲ್, ಪ್ರತ್ಯಯಂಗಳ್ ಪರವಾದೊಡೆ, ಪ್ರಕೃತಿಪ್ರತ್ಯಯಂಗಳ ನಡುವೆ ಅನುಸ್ವಾರಾಗಮಮಪ್ಪುದು.

ನೆಂಬರ್ಥದಲ್ಲಿ "ದ" ಪ್ರತ್ಯಯಂ ವಿಕಲ್ಪದಿಂದಪ್ಪುದು.

ಪ್ರಯೋಗಂ॥ ಅಲ್ಲಿದಂ, ಅಲ್ಲಿಯಣಂ. ಎಲ್ಲಿದಂ-ಎಲ್ಲಿಯಣಂ.

೨೧೨ ಕಾಲಾರ್ಥದಲ್ಲಿ ಅದು-ಇದು-ಉದು ಆವುದು ಶಬ್ದಂಗಳ ಆದಿಸ್ವರಕ್ಕಂ ಅಂತ್ಯತ್ವ್ಯಂಜನಕ್ಕಂ ನಡುವೆ ಅನುಸ್ವರಾದೇಶವುಂ ಆವುದು ಶಬ್ದದ "ಆ" ವುಕಾರಕ್ಕೆ ಎಕಾರಾದೇಶವುಂ, ಅಪ್ಪುದು. ಅದು, ಇದು, ಉದು ಆವುದು ಶಬ್ದಂಗಳ್ಗೆ ಕಾಲಾರ್ಥದಲ್ಲಿ ಎವರಂಎವ ರೆಗಂ. ಎಂಬ ಪ್ರತ್ಯಯಂಗಳುಂ, ಪ್ರಕಾರಾರ್ಥದಲ್ಲಿ ತು, ತುಟು, ತೆ, ಎಂಬ ಪ್ರತ್ಯಯಂಗಳುಂ, ಪ್ರಕೃತ್ಯಂತನಾದ ದುಶಬ್ದಕ್ಕೆ ನಕಾರಾ ದೇಶವುಂ, ಆವುದು ಶಬ್ದಕ್ಕೆ ಎ಼ ಎಂಬಾದೇಶವುಂ, ಅಪ್ಪವು.

ಪ್ರಯೋಗಂ॥ ಅಂದು-ಇಂದು-ಉಂದು ಎಂದು. ಕಾಲಾರ್ಥಕ್ಕೆ= ಅನ್ನೆವರಂ-ಅನ್ನೆವರೆಗಂ. ಇನ್ನೆವರಂ-ಉನ್ನೆವರೆಗಂ. ಎನ್ನೆವರಂ. ಪ್ರಕಾ ರಾರ್ಥಕ್ಕೆ-ಅಂತು ಅಂತುಟು-ಅಂತೆ-ಇಂತು ಉಂತುಟು-ಉಂತೆ. ಎಂತು-

೨೧೩ ಪರಿಮಾಣಾರ್ಥದಲ್ಲಿ ಅದು-ಇದು-ಉದು ಆವುದು ಶಬ್ದಂ ಗಳ ಆದಿಸ್ವರಕ್ಕೆ ಪರನಾದ ವರ್ಣಂಗಳ್ಗೆ ಆದೇಶವಾಗಿ ನಿತು ನಿತ್ತು ಪ್ರತ್ಯಯಂಗಳಪ್ಪುವು. ಆವುದು ಶಬ್ದದ ಆಕಾರಕ್ಕೆ 'ಎ,' ಎಂ ಬಾದೇಶವಪ್ಪುದು. ಪ್ರಯೋಗಂ॥ ಅನಿತು-ಇನಿತು-ಉನಿತು-ಎನಿತ್ತು.

೨೧೪ ಭಾವಾರ್ಥದಲ್ಲಿ ಗುಣವಾಚಕ ಶಬ್ದಂಗಳ ಪೂರ್ವೋ ತ್ತರ ಸ್ವರದಿಂಕೂಡಿದಂತ್ಯ ವ್ಯಂಜನಕ್ಕೆ ಆದೇಶವಾಗಿ 'ಪು' ಪ್ರತ್ಯ ಯ ವಪ್ಪುದು. ಆದೊಡೆ ಎಳದು ಶಬ್ದದಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ವು, ವೆ, ಪ್ರತ್ಯಯಂಗಳಪ್ಪುವು.

ಪ್ರಯೋಗಂ॥ ಬೆಳ್ಪು= ಬಿಳಿದು + ಪು. ತಣ್ಪು, ಎಳವು. ಎಳವೆ.

೨೧೫ ವೇಳಾರ್ಥದಲ್ಲಿ ಸಂಖ್ಯಾವಾಚಕ ಶಬ್ದಂಗಳ್ಗೆ "ಮೆ" ಪ್ರತ್ಯಯವಪ್ಪುದು.

ಪ್ರಯೋಗಂ॥ ಒಂದುವೇಳೆ ಒರ್ವೆ. ನೂರ್ವೆ.

೨೧೬ * ಜಾತಿವಿಷಯದಲ್ಲಿ ಕುಂಬ ಮೊದಲಾದ ಶಬ್ದಂಗಳ್ಗೆ-ರ ಪ್ರತ್ಯಯವಪ್ಪುದು.

ಪ್ರಯೋಗಂ॥ ಕುಂಬಮಂ ಮಾಡುವಂ-ಕುಂಬರಂ. ಕಮ್ಮರಂ.

೨೧೭ ಜಾತಿ ವಿಷಯದಲ್ಲಿ ಪಾವು ಮೊದಲಾದ ಶಬ್ದಂಗಳ್ಗೆ ವಡಿಗ ಪ್ರತ್ಯಯವಪ್ಪುದು. ಮೇಣ್ ಪಾವು ಶಬ್ದದ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ಲೋಪವಪ್ಪುದು.

ಪ್ರಯೋಗಂ॥ ಪಾವು + ವಡಿಗಂ-ಪಾವಡಿಗಂ. ಪೂವಿಂ ಜೀವಿಸುವಂ ಪೂವಡಿಗಂ.

೨೧೮ ಅಧಿಕಾರವುಳ್ಳವನೆಂಬರ್ಥದಲ್ಲಿ ಪಡೆ ಮೊದಲಾದ ಶಬ್ದಂಗಳ್ಗೆ "ವಳ, ವಳ್ಳ" ಪ್ರತ್ಯಯಂಗಳಪ್ಪುವು.

ಪ್ರಯೋಗಂ॥ ಪಡೆವಳಂ, ಪಡೆವಳ್ಳಂ ಅಡಪವಳಂ-ಅಡಪವಳ್ಳಂ.

೨೧೯ ಜಾತಿ ವಿಷಯದಲ್ಲಿ ಮಡಿ ಶಬ್ದಕ್ಕೆ "ವಳ, ವಳ್ಳ, ವಾಳ" ಪ್ರತ್ಯಯಂಗಳಪ್ಪುವು.

ಪ್ರಯೋಗಂ॥ ಮಡಿವಳಂ, ಮಡಿವಳ್ಳಂ, ಮಡಿವಾಳಿ.

೨೨೦ (೧) ಉಳ್ಳವನೆಂಬರ್ಥದಲ್ಲಿ ಜಸ ಮೊದಲಾದ ಶಬ್ದಂಗಳ್ಗೆ "ಉಳ್ಳ, ವಂತ" ಪ್ರತ್ಯಯಂಗಳಪ್ಪುವು.

ಪ್ರಯೋಗಂ ॥ ಜಸವುಳ್ಳಂ—ಜಸವಂತಂ. ಬುದ್ಧಿಯುಳ್ಳಂ—ಬುದ್ಧಿವಂತಂ.

---

* ಶ. ಶಾ. ಇ ಪ್ರತ್ಯಯಮಪ್ಪುದು. (೧) ಅಕಾರಾಂತ ಪ್ರಕೃತಿಗಂ-ಉಳ್ಳ ಪ್ರತ್ಯಯಕ್ಕಂ ನಡುವೆ ಬಿಂದುವಪ್ಪುದು.

೨೨೧ ಸಾಮ್ಯಾರ್ಥದಲ್ಲಿ ಹರಿ ಮೊದಲಾದ ಶಬ್ದಂಗಳ್ಗೆ "ವ್ರೊಲ್, ವ್ರೋಲ್" ಪ್ರತ್ಯಯಂಗಳಪ್ಪುವು.

ಪ್ರಯೋಗಂ॥ ಹರಿವ್ರೋಲ್. ಹರಿವ್ರೊಲ್. ಇಂದ್ರನವ್ರೋಲ್-ಇಂದ್ರನವ್ರೊಲ್.

೨೨೨ ಅಕಾರಾಂತ ಶಬ್ದಂಗಳ್ಗೆ ಪರವಾದ "ವ್ರೋಲ್-ವ್ರೊಲ್" ಪ್ರತ್ಯಯಂಗಳ ವಕಾರಕ್ಕೆ ವಿಕಲ್ಪವಾಗಿ ಬಕಾರಾದೇಶವಪ್ಪುದು.

ಪ್ರಯೋಗಂ ॥ ಇಂದ್ರಂಬೋಲ್-ಇಂದ್ರನವ್ರೋಲ್, ಮಯಣಂಬೊಲ್-ಮಯಣನವ್ರೋಲ್.

೨೨೩ ಷಷ್ಠಿಯಲ್ಲಿ ಸಾಮ್ಯಾರ್ಥದಲ್ಲಿ (೧) "ಒಲ್-ಓಲ್" ಪ್ರತ್ಯಯಂಗಳುಂ ಅಪ್ಪುವು.

ಪ್ರಯೋಗಂ॥ ಚಂದಿರನೊಲ್-ಚಂದಿರನೋಲ್.

೨೨೪ ಅಂಸಾಕುಳಿ-ಆಯ್ಕುಳಿ-ಗಾವಿಲಂ-ಘೋಳಾಯಿಲಂ-ಕೊಲ್ಲಟಿಗಂ-ದೀವಟಿಗಂ-ಕುಸಿಕಂ-ನಸಿಕಂ. ಮೊದಲಾದುವಂ ಮಹಾಕವಿಪ್ರಯೋಗದಿಂ ತಿಳಿವುದು.

ಇಂತು ತದ್ಧಿತ ಪ್ರಕರಣಂ ಮುಗಿದುದು.



(೧) ಅಕಾರಾಂತ ಶಬ್ದಕ್ಕೆ ಪರದಲ್ಲಿ ಒಲ್-ಓಲ್-ವ್ರೊಲ್-ವ್ರೋಲ್ ಪ್ರತ್ಯಯಂಗಳಿರ್ದೊಡೆ ಷಷ್ಠೀವಿಭಕ್ತಿ ಪ್ರತ್ಯಯಕ್ಕೆ ಲೋಪವಿಲ್ಲ. ಅಕಾರಾಂತವಲ್ಲದ ಶಬ್ದಂಗಳ ಷಷ್ಠೀವಿಭಕ್ತಿ ಪ್ರತ್ಯಯಕ್ಕೆ ವಿಕಲ್ಪವಾಗಿ ಲೋಪವಪ್ಪುದು. ಪ್ರ॥ ಹರಿಯವ್ರೊಲ್ ಹರಿವ್ರೊಲ್.

# ಸಮಾಸಪ್ರಕರಣಂ.

೨೨೫ (೧) ಪದಂಗಳ ಸಮುದಾಯವು ಸಮಾಸವೆನಿಪ್ಪುದು.

ಪ್ರಯೋಗಂ॥ ಸಿರಿಯು + ರಾಯಂ = ಸಿರಿರಾಯಂ. ಅಂಗಾಲ್· ಆ ಕಾಂತೆ, ವಜ್ರಂ ಗೊಂಡಂ.

೨೨೬ ಕನ್ನಡದ ಶಬ್ದಕ್ಕ್ಕಂ ಸಂಸ್ಕೃತ ಶಬ್ದಕ್ಕ್ಕಂ, ಸಮಾಸವಿಲ್ಲ-ಆದರೆ ಮಹಾಕವಿಗಳು ಪ್ರಯೋಗಿಸಿರುವುದರಿಂದೆ ಕಡುರಾಗಂ_ಮೊಗರಾಗಂ_ಗುಣಕರು_ತುರಗದಳಂ_ಮಂಗಳಾರತಿ ಮೊದಲಾದ ಶಬ್ದಂಗಳಲ್ಲಿ ಅರಿಸಮಾಸ (೨) ದೋಷವಿಲ್ಲ.

೨೨೭ ಬಿರುದಾವಳಿಯಲ್ಲಿ ಕನ್ನಡದ ಶಬ್ದಕ್ಕ್ಕಂ ಸಂಸ್ಕೃತಶಬ್ದಕ್ಕ್ಕಂ ಸಮಾಸವುಂಟು.

ಪ್ರಯೋಗಂ॥ ರಾಯಕುಲಕಲಭಕೇಸರಿ. ಕರಿಮೆಂಟೆಗಾರಂ.

೨೨೮ ಕ್ರಿಯಾ ಸಮಾಸದಲ್ಲಿಯುಂ, (ಸೂ ೨೩೯) ಗಮಕಸಮಾಸದಲ್ಲಿಯುಂ (ಸೂ ೨೪೪) ಕನ್ನಡದ ಶಬ್ದಕ್ಕ್ಕಂ ಸಂಸ್ಕೃತಶಬ್ದಕ್ಕ್ಕಂ ಸಮಾಸವಪ್ಪುದು.

ಈ ಪ್ರಕರಣದಲ್ಲಿ ವಿಧಿಸಲ್ಪಡುವ ಲೋಪಾದೇಶ ಕಾರ್ಯಂಗಳು ಪೂರ್ವಪದಕ್ಕೆಂದರಿವುದು.

೨೨೯ ಸಮಾಸವು ಅವ್ಯಯೀ ಭಾವಸಮಾಸವೆಂದುಂ, ತ

---

(೧) ಸಮಾಸಪದದಲ್ಲಿ ಪೂರ್ವಪದದ ವಿಭಕ್ತಿ ಪ್ರತ್ಯಯಕ್ಕೆ ಲೋಪವಪ್ಪುದು. ಪ್ರಯೋಗಂ॥ ಸಿರಿಯ + ಕುವರಂ ಸಿರಿಗುವರಂ. ಇಲ್ಲಿ ಪೂರ್ವಪದವಾದ ಸಿರಿ ಶಬ್ದದ ಷಷ್ಠೀವಿಭಕ್ತಿ ಪ್ರತ್ಯಯಕ್ಕೆ ಲೋಪವಾಗಿ ಸಿರಿಗುವರಂ ಎಂದಾಯ್ತು.

(೨) ಸಂಸ್ಕೃತ ಶಬ್ದಕ್ಕ್ಕಂ ಕನ್ನಡದ ಶಬ್ದಕ್ಕ್ಕಂ ಸಮಾಸವಾದೊಡೆ ಅರಿಸಮಾಸವೆನಿಪ್ಪುದು.

ತ್ಪುರುಷ ಸಮಾಸವೆಂದುಂ, ಬಹುವ್ರೀಹಿ ಸಮಾಸವೆಂದುಂ, ದ್ವಂದ್ವಸಮಾಸವೆಂದುಂ, ಚತು (ನಾಲ್ಕು) ರ್ವಿಧಮಾಗಿರ್ಪುದು.

## ಅವ್ಯಯೀಭಾವಸಮಾಸಂ.

೨೩೦ ಪೂರ್ವಪದಾರ್ಥವು ಮುಖ್ಯಮಾಗಿರ್ದೊಡೆ ಅವ್ಯಯೀಭಾವಸಮಾಸವೆನಿಪ್ಪುದು.

ಪ್ರಯೋಗಂ॥ ಅಂಗಾಲ್. ಮುಂಜೂರ್.

೨೩೧ ಪರದಲ್ಲಿ ವ್ಯಂಜನಾದಿಪದವಿರ್ದೊಡೆ ಅಡಿ, ಮೇಗು ಶಬ್ದಂಗಳ ಅಂತ್ಯಸ್ವರಸಿಂ ಕೂಡಿದ ವ್ಯಂಜನಕ್ಕೆ ಅನುಸ್ವಾರಾದೇಶವಪ್ಪುದು.

ಪ್ರಯೋಗಂ॥ ಅಂಗಾಲ್, ಅಂಗಯ್, ಮೇಂಗಾಲ್ (೧)

೨೩೨ ಪರದಲ್ಲಿ ವ್ಯಂಜನಾದಿಪದವಿರ್ದೊಡೆ ಪಿಂದು, ಮುಂದುಶಬ್ದಂಗಳ "ದು" ಶಬ್ದಕ್ಕೆ ಲೋಪವಪ್ಪುದು.

ಪ್ರಯೋಗಂ॥ ಪಿಂಗಣ್, ಪಿಂಗಯ್, ಮುಂಗಾಲ್, ಮುಂಜೂರ್.

೨೩೩ ಕೆಳಗುಶಬ್ದಕ್ಕೆ ಪರದಲ್ಲಿ ವ್ಯಂಜನಾದಿಪದವಿರ್ದೊಡೆ, "ಕಿಳ್" ಎಂಬಾದೇಶವಪ್ಪುದು.

ಪ್ರಯೋಗಂ॥ ಕಿಳ್ಬರಿ—ಕಿಳ್ಬಾಳವಳ್.

೨೩೪ ಕೆಳಗು ಶಬ್ದಕ್ಕೆ ಪರದಲ್ಲಿ ನಕಾರಾದಿ ಪದವಿರ್ದೊಡೆ, ಕಿನಾದೇಶವುಂ, ಸ್ವರಾದಿ ಪದವಿರ್ದೊಡೆ (೨) ಕೀಳ್ಎಂಬಾದೇಶವುಂ ಅಪ್ಪುವು

ಪ್ರಯೋಗಂ॥ ಕೆಳಗು+ನೆಲೆ = ಕಿನ್ನೆಲೆ ಕಿನ್ನೆಲಂ ಕೀಳೇರಿ ಕೀಳಾಳ್

---

೧ ಕ, ಭಾ. ಮೇಗಾಲ್ ಎಂದುಂ ಉಂಟು.

೨ ಶ, ಶಾ, ಕೆಳಗುಶಬ್ದಕ್ಕೆ ಪರದಲ್ಲಿ ವ್ಯಂಜನಾದಿಯಾದ ಪದವಿರ್ದೊಡಂ ಕೀಳೆಂಬಾದೇಶವಪ್ಪುದು ಪ್ರ॥ ಕೀಳ್ಪೊಡೆ,

೨೩೫ ಪೆರಗು ಶಬ್ದಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ ಬಹುಳವಾಗಿ ಪೆಡಂ-ಪೆಡ ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಪೆಡಂಗಯ್ (೧) ಪೆಡಗಯ್. ಪೆಡಂಗಾಲ್ ಪೆಡತಲೆ.

## ತತ್ಪುರುಷಸಮಾಸಂ

೨೩೬ ಉತ್ತರಪದಾರ್ಥವು ಮುಖ್ಯವಾಗಿರ್ದೊಡೆ ತತ್ಪುರುಷಸಮಾಸವೆನಿಪ್ಪುದು.

೨೩೭ ತತ್ಪುರುಷವು ವ್ಯಧಿಕರಣವೆಂದುಂ ಸಮಾನಾಧಿಕರಣವೆಂದುಂ ದ್ವಿ (ಎರಡು) ವಿಧವಾಗಿರ್ಪುದು.

೨೩೮ ವ್ಯಧಿಕರಣತತ್ಪುರುಷವು ೧ ದ್ವಿತೀಯಾತತ್ಪುರುಷವೆಂದುಂ, ೨ ತೃತೀಯಾತತ್ಪುರುಷವೆಂದುಂ, ೩ ಚತುರ್ಥೀತತ್ಪುರುಷವೆಂದುಂ, ೪ ಪಂಚಮೀತತ್ಪುರುಷವೆಂದುಂ, ೫ ಷಷ್ಠೀತತ್ಪುರುಷವೆಂದುಂ, ೬ ಸಪ್ತಮೀತತ್ಪುರುಷವೆಂದುಂ ಷಡ್ (ಆಱು) ವಿಧವಾಗಿರ್ಪುದು. ದ್ವಿತೀಯಾತತ್ಪುರುಷದಲ್ಲಿ ಉತ್ತರಪದವು ತಿಙಂತವಾದೊಡಂ ಕೃದಂತವಾದೊಡಂ ಸಮಾಸವಪ್ಪುದು.

ಪ್ರ॥ ಎಳೆನೀರಂ+ಕುಡಿದಂ = ಎಳೆನೀರ್ಗುಡಿದಂ. ೨ ಕಣ್ಣಿಂ+ಕಾಣದವಂ = ಕಣ್ಗಾಣದವಂ. ೩ ಉಂಗುರಕ್ಕೆ +ಪೊನ್ = ಉಂಗುರಪೊನ್, ತೊಟ್ಟಿಲ್ಗಳಿಗೆಗಳ್. ೪ ಮರುಳತ್ತಣಿಂ+ ಅಳ್ಕು =ಮರುಳಳ್ಕು. ರಾಯವೆಳರು, ೫ ಸಿರಿಯ +ಕುವರಂ = ಸಿರಿಗುವರಂ, ಅರಮನೆ, ೬ ಮಾತಿನೊಳ್+ಚದುರಂ = ಮಾತುಚದುರಂ, ಊಟಜಾಣಂ,

೨೩೯ ದ್ವಿತೀಯಾತತ್ಪುರುಷಸಮಾಸದಲ್ಲಿ ಪೂರ್ವಪದವೊಂ

---

(೧) ಶ-ಶಾ-ಪೆರಗುಶಬ್ದಕ್ಕೆ ಪೆಡ ಎಂಬಾದೇಶಮುಂ ಶ- ಮ- ಪೆರಗು ಶಬ್ದಕ್ಕೆ ಪಿಂತೆಂಬಾದೇಶಮುಂ ಅಪ್ಪುವು, ಪ್ರ॥ ಪಿಂತಿಲ್ ಪಿಂತೊಲೆ,

ದೆ ಸಂಸ್ಕೃತವಾಗಿರ್ದೊಡೆ * ಕ್ರಿಯಾಸಮಾಸವೆನಿಪ್ಪುದು.

ಪ್ರಯೋಗಂ॥ ಚಕ್ರಂಗೊಂಡಂ, ಭೀತಿಗೊಂಡನಂ, ಶೌರ್ಯಮಾಂತಂ.

೨೮೦ ಕ್ರಿಯಾಸಮಾಸದಲ್ಲಿ ಪೂರ್ವಪದವು † ಅಕಾರಾಂತವಾಗಿರ್ದೊಡೆ ಅನುಸ್ವಾರಾಗಮವಪ್ಪುದು.

ಪ್ರಯೋಗಂ॥ ಕರಂಬಿಡಿಸಂ, ಮುಖಂದೊಳೆದಂ,

೨೮೧ ದ್ವಿತೀಯಾತತ್ಪುರುಷದಲ್ಲಿ ಪೂರ್ವಪದವಾದ ಕನ್ನಡ (ತದ್ಭವ, ದೇಶ್ಯ) ದ ಅಕಾರಾಂತ ಶಬ್ದಗಳ್ಗೆ ಬಹುಳವಾಗಿ (೧) ಅನುಸ್ವಾರಾಗಮವಪ್ಪುದು.

ಪ್ರಯೋಗಂ॥ ತದ್ಭವಕ್ಕೆ—ಮೊಗಂದೊಳೆದಂ ಜಸಂಬಡೆದಂ ಜಸವಡೆದಂ ದೇಶ್ಯಕ್ಕೆ ನೆಲಂಬಿಡಿದಂ-ನೆಲವಿಡಿದಂ, ಕಾಳಗಂಗೊಟ್ಟಂ-ಕಾಳಗಗೊಟ್ಟಂ, ಬೀಡಂಬೊಕ್ಕಂ-ಬೀಡುವೊಕ್ಕಂ, ಕಾಡುಂಗಡಿದಂ-ಕಾಡುಗಡಿದಂ,

## ಕರ್ಮಧಾರಯಸಮಾಸಂ

೨೮೨ ಸಮಾನಾಧಿಕರಣತತ್ಪುರುಷವು-ಕರ್ಮಧಾರಯವೆಂದುಂ, ದ್ವಿಗುವೆಂದುಂ ದ್ವಿ [ಎರಡು] ವಿಧವಾಗಿರ್ಪುದು.

೨೮೩ ಕರ್ಮಧಾರಯಸಮಾಸವು ೧ ವಿಶೇಷಣಪೂರ್ವಪದವೆಂದುಂ, ೨ ವಿಶೇಷ್ಯಪೂರ್ವಪದವೆಂದುಂ, ೩ ವಿಶೇಷಣೋಭ

* ಶ-ಮ-ಪೂರ್ವಪದವು ಕಾರಕವಾಗಿಯುಂ ಉತ್ತರಪದವು ಕ್ರಿಯಾಪದವಾಗಿಯುಂ ಇರ್ದೊಡೆ ಕ್ರಿಯಾಸಮಾಸವೆನಿಪ್ಪುದು, ಪ್ರ॥ ಬಳೆದೊಟ್ಟಂ ಗುಣಂಗೊಂಡಂ,

† ಕ-ಭಾ-ಪೂರ್ವಪದವು ಅಕಾರಾಂತವಾಗಿರ್ದೊಡೆ ಬಿಂದುನಿತ್ಯಂ,
ಶ-ಮ-ಕನ್ನಡದಲ್ಲಿ ವಿಕಲ್ಪಂ,

(೧) ಶ-ಶಾ-ಅಕಾರಾಂತಮುಂ ಉಕಾರಾಂತಮುಂ ಆದ ಶಬ್ದಂಗಳ್ಗೆ ಪರದಲ್ಲಿ ವ್ಯಂಜನಾದಿಯಾದ ಧಾತುವಿರ್ದೊಡೆ ವಿಕಲ್ಪವಾಗಿ ಅನುಸ್ವಾರವಪ್ಪುದು,

ಯುಪಪದವೆಂದುಂ, ೪ ಉಪಮಾನಪೂರ್ವಪದವೆಂದುಂ, ೫ ಉಪಮಾನೋತ್ತರಪದವೆಂದುಂ, ೬ ಸಂಭಾವನಾಪೂರ್ವಪದವೆಂದುಂ, ೭ ಅವಧಾರಣಾಪೂರ್ವಪದವೆಂದುಂ ಸಪ್ತ (ಏಳು) ವಿಧಮಾಗಿರ್ಪುದು

ಪ್ರಯೋಗಂ॥ ೧ ಬಿಳಿದು(ಅದ)+ಮುಗಿಲ್ = ಬೆಳ್ಮುಗಿಲ್, ಕಾರಿರುಳ್, ಇಂಚರಂ, ೨ ಕುವರಂ(ಅದ)+ಕಾಮಂ = ಕಾಮಕುವರಂ, ತಪಸಿ [ಯಾದ]+ಶಿವಂ = ಸಿವತಪಸಿ, ೩ ಸೂರಂ[ಆದ]+ಸಾಮಂತಂ[ಆದ] = ಸೂರಸಾಮಂತಂ, ಕಾಮಂ[ಆದ]+ಕೋಲ್ಬಂ[ಆದ]= ಕಾಮಕೋಲ್ಬಂ, ೪ ಚಂದಿರನಂತಿರ್ಪ+ಮೊಗಂ = ಚಂದಿರಮೊಗಂ, ತಾವರೆಗಣ್, ಬಳ್ಳಿಮಿಂಚು, ೫ ಮಿಂಚಿನಂತಿರ್ಪ+ಬಾಳ್ = ಬಾಳ್ಮಿಂಚು ಜಡೆವಳ್ಳಿ, ೬ ಚಕ್ಕವೆಂಬ+ಪಕ್ಕಿ = ಚಕ್ಕವಕ್ಕಿ, ಬಿಂಜವೆಂಬ+ಬೆಟ್ಟು = ಬಿಂಜವೆಟ್ಟು, ೭ ಮೊಗಮೆ+ಪೆರೆ ಮೊಗವೆರೆ, ಬೀರದೊಡವುಗಳ್, ಬಿಚ್ಚವಣಂ,

೨೮೪ ಸಂಖ್ಯಾ, ಸರ್ವನಾಮ, ಗುಣವಚನ, ಕೃದಂತಂಗಳಾದ ಕನ್ನಡದ ಶಬ್ದಂಗಳು ಪೂರ್ವಪದಂಗಳಾಗಿಯುಂ ಸಂಸ್ಕೃತ ಶಬ್ದಂಗಳುತ್ತರಪದಂಗಳಾಗಿಯುಂ * ಇರ್ದೊಡೆ ಗಮಕಸಮಾಸವೆನಿಪುದು.

ಪ್ರಯೋಗಂ॥ ಸಂಖ್ಯೆಗೆ-ಎರಳ್ದಂತಿಗಳ್-ಎಣ್ಮದಂಗಳ್
ಸರ್ವನಾಮಕ್ಕೆ-ಆಮನುಷ್ಯಂ-ಎಲ್ಲಾಲೋಕಂಗಳ್
ಗುಣವಾಚಕಕ್ಕೆ-ಕೆನ್ನಳಿನಂ-ಬೆಳ್ಗೃಹಂ
ಕೃದಂತಕ್ಕೆ-ಬೀಸುವಚಾಮರಂ-ಪೊಡೆವಭೇರಿ

೨೮೫ ತೆಂಗುಶಬ್ದಕ್ಕೆ ಪರದಲ್ಲಿ ಕವರ್ಣಮಿರ್ದೊಡಂ-ಮಾವು

---

* ಶ-ಮ-ಉತ್ತರಪದವು ಕನ್ನಡದ ಶಬ್ದವಾಗಿರ್ದೊಡಂ ಗಮಕಸಮಾಸವೆನಿಪುದು.

ಶಬ್ದಕ್ಕೆ ಪರದಲ್ಲಿ ಸುವರ್ಣವಿರ್ದೊಡಂ-ಪೂರ್ವಪದದ ಕಡೆಯ ಸ್ವರದಿಂ ಕೂಡಿದ ವ್ಯಂಜನಕ್ಕೆ ಲೋಪವಪ್ಪುದು.

ಪ್ರಯೋಗಂ॥ ತೆಂಗು+ಕಾಯ್ಗಳ್ = ತೆಂಗಾಯ್ಗಳ್, ಮೊಮರಂ ಮೊವಿಡಿ,

೨೭೬ (೧) ಪಚ್ಚನೆ-ಪೊಸತು-ಪಳದು-ಎಳದು-ಒಳಗು-ಪೊರಗು-ನರವು ಮೊದಲಾದ ಶಬ್ದಂಗಳ-"ಕಡೆಯಸ್ವರದಿಂಕೂಡಿದ ವ್ಯಂಜನಕ್ಕೆ" ಲೋಪವಪ್ಪುದು.

ಪ್ರಯೋಗಂ॥ ಪಚ್ಚಪಸಿ- ಪೊಸಅಡಿಕೆ- ಪಳವಾನಿಸಂ- ಎಳಅಂಚೆ- ಒಳತಳ್- ಪೊರಅಂಗಳಂ- ನರಗಟ್ಟು-ಅರಮನೆ,

೨೭೭ ತಣ್ಪಿತುಮೊದಲಾದ ಶಬ್ದಂಗಳ ಪೂರ್ವೋತ್ತರಸ್ವರಂಗಳೊಡನೆ ಅಂತ್ಯವ್ಯಂಜನಕ್ಕೆ ಲೋಪವಪ್ಪುದು.

ಪ್ರಯೋಗಂ॥ ತಣ್ಪಿತು+ನೆಳಲ್ = ತಣ್ಣೆಳಲ್, ಬಿಸೊಗ್ಗೆ-ಇಂಚರಂ-ಒಳ್ಗಜ್ಜಂ-ತೆಳ್ಗದಂಪು-ಮೆಲ್ಲುಲಿ-ನಲ್ಬಾತುಗಳ್-ಕರ್ಗಳ್ತಲೆ-ಕಿರ್ಗಣ್

೨೭೮ ಬಿಳದು-ಪಿರಿದು-ಶಬ್ದಂಗಳ ಆದಿಸ್ವರಕ್ಕೆ ಎಕಾರಾದೇಶಮಪ್ಪುದು.

ಪ್ರಯೋಗಂ॥ ಬೆಳ್ಗೊಡೆ-ಬೆಳ್ದಿಗಿಲ್ ಪೆರ್ಗಡು ಪೆರ್ದೊರೆ,

೨೭೯ ಕರಿದು-ಪಿರಿದು ಶಬ್ದಂಗಳ್ಗೆ ಪರದಲ್ಲಿ ಸ್ವರಾದಿಯಾದ ಪದವಿರ್ದೊಡೆ ಪೂರ್ವಪದದ ಆದಿಸ್ವರಕ್ಕೆ ದೀರ್ಘಾದೇಶವಪ್ಪುದು.

ಪ್ರಯೋಗಂ॥ ಕಾರಿರುಳ್-ಕಾರೊಡಲ್-ಪೇರಾನೆ-ಪೇರಿಳೆ,

೨೮೦ ಬಟ್ಟಿತು-ತೋರಿತು ಶಬ್ದಂಗಳ ಟಕಾರರೇಫಂಗಳ್ಗೆ ಪರದಲ್ಲಿರ್ಪ ವರ್ಣಂಗಳ್ಗೆ ಅಕಾರಾದೇಶವಪ್ಪುದು.

---

(೧) ಕಿ-ಕಾ-ಕೆಚ್ಚನೆ+ಓಲೆ= ಕೆಚ್ಚೋಲೆ, ಬೆಚ್ಚೋಡು

ಪ್ರಯೋಗಂ॥ ಬಟ್ಟವೊಗಂ-ಬಟ್ಟದಲೆ-ತೋರತೊಡೆ-ತೋರಮುಡಿ

೨೫೧ ಕಡಿದು-ಸಿಡಿದು-ನಡು ಶಬ್ದಂಗಳ್ಗೆ ಪರದಲ್ಲಿ ಸ್ವರಾದಿ ಪದವಿರ್ದೊಡೆ ಪೂರ್ವಪದದ ‹‹ಆದಿಸ್ವರಕ್ಕೆ ಪರವಾದ ವರ್ಣಂಗಳ್ಗೆ'' ದ್ವಿತ್ವ ಟಕಾರಾದೇಶವಪ್ಪುದು.

ಪ್ರಯೋಗಂ॥ ಕಟ್ಟಾಳ್-ಕಟ್ಟಡವಿ-ನಿಟ್ಟೋಟಂ-ನಿಟ್ಟುಸಿರ್-ನಟ್ಟಿರುಳ್-ನಟ್ಟಾಲಿ

೨೫೨ ಕಿರಿದುಶಬ್ದಕ್ಕೆ ಪರದಲ್ಲಿ ಸ್ವರಾದಿಪದವಿರ್ದೊಡೆ ಪೂರ್ವಪದದ ‹‹ಆದಿಸ್ವರಕ್ಕೆ ಪರನಾದ ವರ್ಣಂಗಳ್ಗೆ'' ಬಹುಳವಾಗಿ ದ್ವಿತ್ವ ತಕಾರಾದೇಶವಪ್ಪುದು.

ಪ್ರಯೋಗಂ॥ ಕಿರಿದು + ಅಡಿ = ಕಿತ್ತಡಿ-ಕಿತ್ತಿಳೆ

೨೫೩ ಕರಿದು ಮೊದಲಾದ ಶಬ್ದಂಗಳ ‹‹ಕಡೆಯುಸ್ವರದಿಂ ಕೂಡಿದ ವ್ಯಂಜನಕ್ಕೆ ಬಹುಳವಾಗಿ ಲೋಪವಪ್ಪುದು.

ಪ್ರಯೋಗಂ॥ (೧) ಕರಿಗೊರಲಂ-ಕಿರಿಮಗಂ-ಬಿಳಿಯುಲರ್ಗಣ್ಗಳ್-ಪಸಿಮೆಯ್-ಅಸಿನಡು-ನಳಿದೋಳ್

೨೫೪ ಉತ್ತರಪದವು ವ್ಯಂಜನಾದಿಯಾಗಿರ್ದೊಡೆ ಬಿಟ್ಟಿತು ಶಬ್ದಕ್ಕೆ ‹‹ಬಿರು'' ಕಡಿದುಶಬ್ದಕ್ಕೆ ‹‹ಕಡು'' ನಿಡಿದುಶಬ್ದಕ್ಕೆ ‹‹ನಿಡು'' ಕಿರಿದುಶಬ್ದಕ್ಕೆ 'ಕಿರು'-'ಕುರು' ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಬಿರುಗಾಳಿ-ಬಿರುಮಳೆ-ಕಡುಗಲಿ-ಕಡುಚಾಗಿ ನಿಡುಸರಲ್-ನಿಡುದೋಳ್-ಕಿರುಗೂಸು-ಕಿರುನಗೆ-ಕುರುಗಂಟುಂ-ಕುರುಮನೆ

೨೫೫ ಕೆಚ್ಚನೆ-ಪಚ್ಚನೆ-ಬೆಚ್ಚನೆ (೨) ಶಬ್ದಂಗಳ್ಗೆ ಪರದಲ್ಲಿ ವರ್ಗಾಕ್ಷರಂಗಳಿರ್ದೊಡೆ ಪೂರ್ವಪದದ ಆದಿಸ್ವರಕ್ಕೆ ಪರವಾದ ವರ್ಣಂಗಳ್ಗೆ ಬಹುಳವಾಗಿ ಅನುಸ್ವಾರಾದೇಶವಪ್ಪುದು.

---

(೧) ಶ-ಮ-ಲುಪ್ತಾಕ್ಷರಕ್ಕೆ ಅಕಾರಾದೇಶವಪ್ಪುದು ಪ್ರ॥ ಕಿರಿಯುಮಗಂ-ಅಸಿಯುನಡು-ಪಸಿಯುಬಣ್ಣಂ

(೨) ಶ-ಶಾ-ಪರದಲ್ಲಿ ವ್ಯಂಜನವಿರ್ದೊಡೆ ಅನುಸ್ವಾರಾದೇಶವಪ್ಪುದು

ಪ್ರಯೋಗಂ ॥ ಕೆಂಗರಿಗಳ್-ಕೆಂಜಡೆ-ಕೆಂದಳಿರ್-ಕೆಂಬಟ್ಟೆಗಳ್ ಪಂಗಾಯ್-ಪನ್ನೀರ್-ಬೆಂಗದಿರ್-ಬೆನ್ನೀರ್

೨೫೬ ಕೆಚ್ಚನೆಶಬ್ದದ [ಆದಿಸ್ವರಕ್ಕೆ ಪರನಾದವರ್ಣಂಗಳ್ಗೆ ಅನುಸ್ವಾರಾದೇಶವಾದೊಡೆ] ಕಕಾರಕ್ಕೆ ಬಹುಳವಾಗಿ ಚಕಾರಾದೇಶವಪ್ಪುದು.

ಪ್ರಯೋಗಂ॥ ಚೆಂದಳಿರ್ ಚೆಂಬೊಣ

೨೫೭ ಕೆಚ್ಚನೆ-ಬೆಚ್ಚನೆ ಶಬ್ದಂಗಳ್ಗೆ ಪರದಲ್ಲಿ ವ್ಯಂಜನವಿದೊರ್ಡೆ ಪೂರ್ವಪದಂಗಳ್ಗೆ ಬಹುಳವಾಗಿ ಕಿಸು-ಬಿಸು ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಕಿಸುಗದಿರ್-ಕಿಸುಸಂಜೆ-ಬಿಸುನೀರ್

೨೫೮ [೧] ಕಿಸುಶಬ್ದಕ್ಕೆ ಪರದಲ್ಲಿ ಸ್ವರವಿರ್ದೊಡೆ ಪೂರ್ವಪದದ ಇಕಾರಕ್ಕೆ ಬಹುಳವಾಗಿ ಏಕಾರಾದೇಶವಪ್ಪುದು.

ಪ್ರಯೋಗಂ ॥ ಕೇಸಕ್ಕಿ-ಕೇಸಡಿ-ಕೇಸುರಿ

೨೫೯ ಕೊಂಕುಶಬ್ದಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ ಪೂರ್ವಶಬ್ದಕ್ಕೆ ವಿಕಲ್ಪನಾಗಿ „ಕುಡು" ಎಂಬಾದೇಶವಪ್ಪುದು.

ಪ್ರಯೋಗಂ॥ ಕುಡುವಿಲ್-ಕೊಂಕುವಿಲ್-ಕುಡುವುರ್ಬು-ಕೊಂಕುವುರ್ಬು

೨೬೦ ಅದು-ಇದು-ಉದು ಶಬ್ದಂಗಳ್ಗೆ ಕ್ರಮವಾಗಿ ಆ ಈ ಊ ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ಆರಾಯುಂ- ಆವನಿತೆ- ಆಮರಂ- ಈಪತಿ- ಈಪತ್ನಿ- ಈಫಲಂ-ಊವುರುಷಂ

೨೬೧ ಎಲ್ಲದು ಪೆರತು ಪೆರದು ಶಬ್ದಂಗಳ ಕಡೆಯಸ್ವರದಿಂ ಕೂಡಿದ ವ್ಯಂಜನಕ್ಕೆ ಲೋಪವಪ್ಪುದು.

---

(೧) ಕ-ಶಾ-ಕಿಸು-ಬಿಸು ಶಬ್ದಂಗಳ್ಗೆ ಉರಿ ಮೊದಲಾದ ಶಬ್ದಂಗಳ್ ಪರನಾದೊಡೆ ಏಕಾರಾದೇಶವಪ್ಪುದು ಪ್ರಯೋಗಂ॥ಬೇಸುರಿ-ಬೇಸೋಡು

ಪ್ರಯೋಗಂ॥ಎಲ್ಲವಾನಿಸರ್- ಎಲ್ಲಕಾಂತೆಯರ್- ಪೆರನಾಡು- ಪೆರವಾರ್ತೆ

೧೬೨ ಎಲ್ಲಶಬ್ದದ ಅಕಾರಕ್ಕೆ ವಿಕಲ್ಪವಾಗಿ ದೀರ್ಘಾದೇಶವಪ್ಪುದು.

ಪ್ರಯೋಗಂ॥ ಎಲ್ಲಾ ವಾನಿಸರ್-ಎಲ್ಲವಾನಿಸರ್-ಎಲ್ಲಾ ಸೊಗಂಗಳ್

೧೬೩ ಆವುದು ಶಬ್ದಕ್ಕೆ ಆವ ಎಂಬಾದೇಶವಪ್ಪುದು.

ಪ್ರಯೋಗಂ॥ ಆವಪ್ರಣ್ಯವತಿ-ಆವಪಡೆ-ಆವಪರಿ

೧೬೪ ದೀರ್ಘಾದಿಯಾದ ಶಬ್ದಂಗಳ ಕಡೆಯ ಱಡುವರ್ಣಂಗಳ್ಗೆ ಪರದಲ್ಲಿ ವ್ಯಂಜನವಿರ್ದೊಡೆ ಆಱಡುವರ್ಣಂಗಳ್ಗೆ ವಿಕಲ್ಪವಾಗಿ ರೇಫ ಱಕಾರಾದೇಶಂಗಳಪ್ಪುವು.

ಪ್ರಯೋಗಂ ॥ ನೇಸಱು+ ಬಟ್ಟು = ನೇಸರ್ಬಟ್ಟು ನೇಸಱುಬಟ್ಟು ಬೇಸನ್ರ್ನುಡಿ- ಬೇಸಱುನುಡಿ-ಮೂಱ್ನುಡಿಗಳ್-ಮೂಱುನುಡಿಗಳ್ (೧) ಅಗ್ರ್ಗಾವುದಂ-ಅಱುಗಾವುದಂ-ಕಾಡು + ಕಿಚ್ಚು = ಕಾೞ್ಕಿಚ್ಚು ಕಾಡುಕಿಚ್ಚು ಕೋೞ್ಕಟ್ಟು ಕೋಡುಕಟ್ಟು

೧೬೫ ಬಹು ಸ್ವರವುಳ್ಳ ಶಬ್ದಂಗಳ ಕಡೆಯ ಱ ಡು ವರ್ಣಂಗಳ್ಗೆ ಪರದಲ್ಲಿ ವ್ಯಂಜನವಿರ್ದೊಡೆ ಆ ಱ ಡು ವರ್ಣಂಗಳ್ಗೆ ವಿಕಲ್ಪವಾಗಿ ರೇಫ ಱಕಾರಾದೇಶಂಗಳಪ್ಪುವು.

ಪ್ರಯೋಗಂ ॥ ಬಿದರ್ಗಂಟೆ-ಬಿದಱುಗಂಟೆ. ಕೆದರ್ಕಲೆ-ಕೆದಱುಕಲೆ ಮುದುೞ್ಗಂಟೆ-ಮುದುಡುಗಂಟು.

೧೬೬ ಹ್ರಸ್ವಾದಿಯೊಳದ ದ್ವಿ (ಎರಡು) ಸ್ವರವುಳ್ಳ ಶಬ್ದಂಗಳ ಕಡೆಯ ಱ-ಡುವರ್ಣಂಗಳ್ಗೆ ರೇಫ ಱಕಾರಾದೇಶವಿಲ್ಲ.

ಪ್ರಯೋಗಂ ॥ ತುಱುಗಾಡು—ಕುಱುಗಂಟು—ಕುಡುವಿಲ್ಲಂ—ಕಡುಗಲಿ

---

(೧) ಶ-ಶಾ. ಆಱುಶಬ್ದಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ ರೇಫಾದೇಶವಿಲ್ಲ. ಪ್ರ॥ ಆಱು + ಗಾವುದಂ = ಆಱುಗಾವುದಂ.

೨೭೭ (೧) ಮಹಚ್ಛಬ್ದಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ "ಮಾ" ಎಂಬಾದೇಶಮಪ್ಪುದು.

ಪ್ರಯೋಗಂ ॥ ಮಹತ್ + ದೇವಂ= ಮಾದೇವಂ, ಮಾಕಾಳಿ, ಮಾರಾಯಂ.

೨೭೮ ಕೃದಂತಶಬ್ದಂಗಳ್ಗೆ ವ್ಯಂಜನಾದಿ ಶಬ್ದಂ ಪರವಾದೊಡೆ (೨) ಬಹುಳವಾಗಿ ಕೃತ್ಪ್ರತ್ಯಯಕ್ಕೆ ಲೋಪಮಪ್ಪುದು.

ಪ್ರಯೋಗಂ ॥ ಕುಸಿಗೊರಲ್, ಉಡುಗೊರೆ, ತುಡುಜೊಡಂ.

೨೭೯ ವ್ಯಂಜನಾಂತಧಾತುವಿಂಗೆ ಪರವಾದ ಕೃತ್ಪ್ರಯಕ್ಕೆ ಲೋಪವಿಲ್ಲ.

ಪ್ರಯೋಗಂ ॥ ನೋಂತಪೆಣ್-ನಾಂದಬಟ್ಟೆ.

೨೮೦ (೩) ಉಕಾರಾಂತವಾದ ಶಬ್ದಂಗಳ್ಗೆ ಪರದಲ್ಲಿ ಗ-ದ-ಬ-ಜಕಾರಾದಿ ಪದವಿರ್ದೊಡೆ ಪೂರ್ವೋತ್ತರಪದಂಗಳ ನಡುವೆ ಬಹುಳವಾಗಿ ಅನುಸ್ವಾರಾಗಮುವಪ್ಪುದು.

---

(೧) ಶ-ಶಾ-ಸಹಶಬ್ದಕ್ಕೆ 'ಸಾ' ಎಂಬಾದೇಶಂ ವಿಕಲ್ಪವಾಗಿ ಬರ್ಪುದು. ಪ್ರ॥ ಸಹದೇವಂ-ಸಾದೇವಂ. ಸಹವಾಸಿ-ಸಾವಾಸಿ.

(೨) ಶ-ಶಾ, ಕೃದಂತಶಬ್ದಂಗಳ್ಗೆ ಪರದಲ್ಲಿ ಸ್ವರಾದಿ ಪದವಿರ್ದೊಡಂ ಅಂತ್ಯವ್ಯಂಜನಕ್ಕೆ ಪೂರ್ವೋತ್ತರ ಸ್ವರಂಗಳೊಡನೆ ಲೋಪಮಪ್ಪುದು.

(೩) ಶ-ಮ. ಅಕಾರಾಂತಕ್ಕೆ ಬಿಂದು ವ್ಪುಟ್ಟ ಪ್ರ॥ ಕಳ್ಳಂಗಡಲೆ: ಬಕ್ಕಂಬಯಲ್, ಶ-ಶಾ, ಪೆರಗು ಮೊದಲಾದ ಶಬ್ದಂಗಳ್ಗೆ ವಿಕಲ್ಪವಾಗಿ ಬಿಂದು ವಪ್ಪುದು—ಪ್ರ॥ ಪೆಡಂಗಯ್, ಪೆಡಗಯ್, ಬಗ್ಗಂದೊವಲ್-ಬಗ್ಗದೊವಲ್, ಅಗಸಂಬೊಚ್ಚಂ—ಅಗಸವೊಚ್ಚಂ-ಶ-ಮ, ಶ-ಶಾ. ಇಕಾರಾಂತ ಶಬ್ದಕ್ಕೆ " ಉಂ " ಎಂಬಾಗಮಪ್ಪುದು. ಪ್ರ॥ ನಿಡಿಯುಂದಲೆ-ಇಟಿಯುಂಬೊಳ್ತು. ನಿಡಿದಲೆ.

ಪ್ರಯೋಗಂ ॥ ಎತ್ತುವುದು + ಕೋಲ್ = ಎತ್ತುಂಗೋಲ್. ಚುರ್ಚುಂಗೊಳ್ಳಿ- ಬೆಟ್ಟುಂಗಾಡು- ಬೆಟ್ಟುಗಾಡು. ಮೊತುಂಗುಟ್ಟಿದಂ— ಮೊತುಗುಟ್ಟಿದಂ. ಮುರ್ದುಂಗೋಳ್-ಮುರ್ದುಗೋಳ್. ತೂಗುಂದೊಟ್ಟಿಲ್-ಓಡುಂದೋರೆ. ಆಡುಂಬೊಲಂ-ಮಿಂಚುಂಬುಳು. ತೂಗುಂಜೋಡರ್. ಏರುಂಜವ್ವನೆ.

೨೩೧ (೧) ನ-ಣ ಕಾರಾಂತ ಶಬ್ದಂಗಳ್ಗೆ ಪರದಲ್ಲಿ ವ್ಯಂಜನಾದಿಯಾದ ಪದವಿರ್ದೊಡೆ ಪೂರ್ವೋತ್ತರ ಪದಂಗಳನಡುವೆ, "ಅಂ" ಎಂಬಾಗಮವು ಬಹುಳವಾಗಿ ಬರ್ಪುದು.

ಪ್ರಯೋಗಂ॥ ಮೀನಂಬುಳು-ಮೀಂಬುಳು. ಬಾನಂಗುಳಿ— ಬಾಂಗುಳಿ. ಕಣ್ಣಂ ದೊಳಲಿ-ಕಣ್ದೊಳಲಿ. ಗೋಣಂನಾಳಿ-ಗೋಣ್ನಾಳಿ.

೨೩೨ ಹ್ರಸ್ವಾದಿಯಾದ ದ್ವಿ ಸ್ವರವುಳ್ಳ ಶಬ್ದಾಂತವಾದ ಱ ಡುವರ್ಣಂಗಳ್ಗೆ ಅನುಸ್ವಾರಾಗಮವಿಲ್ಲ.

ಪ್ರಯೋಗಂ ॥ ಅಱುಗಾವುದಂ ಬಿಱುಗಾಳಿ, ಕುಡುಗೋಲ್, ತುಡುಜೋಡರ್.

## ದ್ವಿಗುಸಮಾಸಂ.

೨೩೩ ತತ್ಪುರುಷ ಸಮಾಸದಲ್ಲಿ ಪೂರ್ವಪದವು ಸಂಖ್ಯಾವಾಚಕವಾಗಿರ್ದೊಡೆ ದ್ವಿಗುಸಮಾಸವೆನಿಪ್ಪುದು.

ಪ್ರಯೋಗಂ॥ ಬರ್ಬಟ್ಟೆ, ಇರ್ಮೊತುಗಳ್, ಇರ್ತಡಿ.

೨೩೪ ದ್ವಿಗುಸಮಾಸವು ತದ್ಧಿತಾರ್ಥದ್ವಿಗುವೆಂದುಂ ಸಮಾಹಾರ ದ್ವಿಗುವೆಂದುಂ ದ್ವಿ (ಎರಡು) ವಿಧಮಾಗಿಪ್ಪುದು.

---

(೧) ಶ-ಮ. ಳಕಾರಾಂತ ಶಬ್ದಕ್ಕೆ "ಉಂ" ಎಂಬಾಗಮವುಣ್ಟು. ಶ-ಶಾ, ಬಹುಳವಾಗಿ "ಉಂ" ಎಂಬಾಗಮವಪ್ಪುದು. ಪ್ರ॥ ಬೆಳ್ಳುಂಬಟ್ಟೆ- ಬೆಳ್ವಟ್ಟೆ, ತೆಳ್ಳುಂ ಬಸಿರ್-ತೆಳ್ವಸಿರ್.

ಪ್ರಯೋಗಂ || ತದ್ಧಿತಾರ್ಥದ್ವಿಗುವಿಂಗೆ-ಒಬ್ಬಗಟ್ಟಿ, ಇರ್ಕ್ಕಾತುಗಳ್, ಸಮಹಾರದ್ವಿಗುವಿಂಗೆ–ಮೂಜಗಂ, ಮೂದಾರಿ.

೨೩೫ (೧) ಒಂದು-ಎರಡು-ಆಱು ಈ ಶಬ್ದಂಗಳ್ಗೆ ಪರದಲ್ಲಿ ವ್ಯಂಜನವಿದೊಡೆ ಕ್ರಮವಾಗಿ ಒರ್-ಇರ್-ಅ ಱು ಎಂಬಾದೇಶಂಗಳ್ ವಿಕಲ್ಪವಾಗಿ ಬರ್ಪುವು.

ಪಯೋಗಂ|| ಒಂದು + ಪಡೆ= ಒರ್ಪಡೆ, ಒಂದುಪಡೆ, ಇರ್ಕಯ್ ಎರಳ್ಕಯ್, ಆಱುಬಟ್ಟೆಗಳ್-ಆಱುಬಟ್ಟೆಗಳ್.

೨೩೬ ಒಂದು–ಎರಡು ಈ ಶಬ್ದಂಗಳ್ಗೆ ಆದೇಶವಾಗಿಬಂದ ಒರ್–ಇರ್ ಶಬ್ದಂಗಳ್ಗೆ ಪರದಲ್ಲಿ ಸ್ವರವಿರ್ದೊಡೆ ಪೂರ್ವಸ್ವರಕ್ಕೆ ದೀರ್ಘಾದೇಶವಪ್ಪುದು.

ಪ್ರಯೋಗಂ|| ಓರೊಂದು-ಓರೊಂಟಿ-ಈರ್ಯೈದು-ಈರೇಳ್.

ಒದೊಂದಂ ಇಲ್ಲಿ ಒರ್‌ಶಬ್ದವಿಲ್ಲ ಅದರಿಂದೀರ್ಘವಿಲ್ಲ.

೨೩೭ ವ್ಯಂಜನಾದಿ ಪದವು ಪರದಲ್ಲಿರ್ದೊಡೆ (೨) ಮೂಱು-ಆಱು-ಏಳು-ನೂಱು ಸಾಸಿಱ, ಈಶಬ್ದಂಗಳ ಕಡೆಯ ಸ್ವರಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ|| ಮೂರ್ಸೂಳ್-ಮೂಱುಸೂಳ್, ಆರ್ಧಾಸಿರಂ–ಆಱುಸಾಸಿರಂ, ಏಳ್ಗಾವುದಂ-ಏಳುಗಾವುದಂ, ನೂರ್ಕ್ಕಾತುಗಳ್-ನೂಱು ಮೊತುಗಳ್, ಸಾಸಿರ್ವೊಗಂಗಳ್-ಸಾಸಿಱವೊಗಂಗಳ್.

೨೩೮ ಪರದಲ್ಲಿ ವ್ಯಂಜನಾದಿ ಪದವಿರ್ದೊಡೆ ನಾಲ್ಕು-ಅಯ್ದು-ಎಣ್ಟು ಈ ಶಬ್ದಂಗಳ ಕಡೆಯ ಸ್ವರದಿಂಕೂಡಿದ ವ್ಯಂಜನಕ್ಕೆ

---

(೧) ಕ-ಭಾ. ಒಂದು ಶಬ್ದಕ್ಕೆ ಓರ್-ಏಳುಶಬ್ದಕ್ಕೆ ಎಳ್ ಎಂಬಾದೇಶಂಗಳಕ್ಕುಂ, ಪ್ರ|| ಓರ್ನುಡಿ ಎಳ್ಕೊಡಲ್.

(೨) ಶ-ಶಾ. ಮೂಡಲೆಯುಂ-ಮುತ್ತಲೆ-ಮುಮ್ಮೆ-ಮೂವ್ವರ್.

ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ॥ ನಾಲ್ಗಯ್ಯಂ-ನಾಲ್ಕುಕಯ್ಯಂ-ಅಯ್ದೊಗಂ-ಅಯ್ದುಮೊಗಂ, ಎಣ್ದೆಸೆ-ಎಣ್ಟುದೆಸೆ.

೨೭೯ ಪರದಲ್ಲಿ ಸ್ವರಾದಿ ಪದವಿರ್ದೊಡೆ ಮೂಱು ಎಂಬ ಶಬ್ದಕ್ಕೆ "ಮುಯ್" ಎಂಬಾದೇಶಂವಿಕಲ್ಪವಾಗಿ ಬರ್ಪುದು.

ಪ್ರಯೋಗಂ ॥ ಮುಯ್ಯಡಿ-ಮೂರಡಿ. ಮುಯ್ಯಾನೆ-ಮೂರಾನೆ.

೨೮೦ ಮೂಱು ಶಬ್ದಕ್ಕೆ ಪರದಲ್ಲಿ ವ್ಯಂಜನಾದಿ ಪದವಿರ್ದೊಡೆ ಱು ಶಬ್ದಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ॥ ಮೂದಲೆ, ಮೂಱುತಲೆ, ಮೂಲೋಕಂ-ಮೂಱುಲೋಕಂ.

೨೮೧ ಪರದಲ್ಲಿ ವ್ಯಂಜನವಿರ್ದೊಡೆ (೧) ಮೂರುಶಬ್ದಕ್ಕೆ ಕೆಲವೆಡೆಗಳಲ್ಲಿ ವಿಕಲ್ಪವಾಗಿ "ಮು" ಎಂಬಾದೇಶವಪ್ಪುದು.

ಪ್ರಯೋಗಂ॥ ಮುಗ್ಗಡಿ = ಮೂಱುಗಡಿ. ಮುಕ್ಕೊಡೆ = ಮೂಱು ಕೊಡೆ. ಮುಚ್ಚೇರಿ = ಮೂರುಸೇರಿ. ಮುಪ್ಪುರಿ = ಮೂರುಪುರಿ.

೨೮೨ "ಒಂಬತ್ತು" ಶಬ್ದಕ್ಕೆ ಪರದಲ್ಲಿ "ಪತ್ತು" ಶಬ್ದವಿರ್ದೊಡೆ "ತೊಂ" ಎಂಬಾದೇಶವಪ್ಪುದು.

ಪ್ರಯೋಗಂ॥ ತೊಂಬತ್ತು.

೨೮೩ ಒಂಬತ್ತುಶಬ್ದಕ್ಕೆ ಪರದಲ್ಲಿ "ನೂರು-ಸಾಸಿರ" ಶಬ್ದಂಗಳಿರ್ದೊಡೆ ವಿಕಲ್ಪವಾಗಿ "ಒಂಬಯ್" ಎಂಬಾದೇಶವಪ್ಪುದು.

ಪ್ರಯೋಗಂ॥ ಒಂಬಯ್ನೂಱು = ಒಂಬತ್ತುನೂರು. ಒಂಬಯ್ಸಾಸಿರಂ = ಒಂಬತ್ತುಸಾಸಿರಂ.

---

(೧) ಕ-ಭಾ. ಹ್ರಸ್ವಂಗಳಾದ ಕ-ಪವರ್ಗಾಕ್ಷರಂಗಳ್ ಪರವಾದೊಡೆ ಪೂರ್ವಪದವಾದ ಮೂಱು ಶಬ್ದಕ್ಕೆ ಮುಶಬ್ದಾದೇಶವಪ್ಪುದು.

೨೮೪ "ಪತ್ತು" (೧) ಶಬ್ದಕ್ಕೆ "ಸಾಸಿರ" ಶಬ್ದಂ ಪರವಾದೊಡೆ ವಿಕಲ್ಪವಾಗಿ ಪಯಿನ್ ಎಂಬಾದೇಶವಪ್ಪುದು.

ಪ್ರಯೋಗಂ॥ ಪಯಿಂಚಾಸಿರಂ = ಪತ್ತುಸಾಸಿರಂ.

೨೮೫ ಪತ್ತುಶಬ್ದಕ್ಕೆ ಒಂದು-ಎರಡು ಎಂಬ ಶಬ್ದಂಗಳ್ ಪರವಾದೊಡೆ "ಪನ್" ಎಂಬಾದೇಶವಪ್ಪುದು.

ಪ್ರಯೋಗಂ॥ ಪನ್ನೊಂದು-ಪನ್ನೆರಡು.

೨೮೬ ಪತ್ತುಶಬ್ದಕ್ಕೆ ಮೂರು-ನಾಲ್ಕು ಶಬ್ದಂಗಳ್ ಪರವಾದೊಡೆ ಪದಿಯೆಂದುಂ ಅಯ್ದು-ಆಱು-ಏಳು-ಎಣ್ಟು ಶಬ್ದಂಗಳ್ ಪರವಾದೊಡೆ "ಪದಿನ್" ಎಂದುಂ ಆದೇಶವಪ್ಪುದು.

ಪ್ರಯೋಗಂ ॥ ಪದಿಮೂರು-ಪದಿನಾಲ್ಕು-ಪದಿನೈದು-ಪದಿನಾರು-ಪದಿನೇಳು-ಪದಿನೆಣ್ಟು.

೨೮೭ ದ್ವಂದ್ವ ಸಮಾಸದಲ್ಲಿ ಸಂಖ್ಯಾವಾಚಕ ಶಬ್ದಂಗಳ್ಗೆ ಮೇಲೆ ಹೇಳಲ್ಪಟ್ಟ ಕಾರ್ಯಂಗಳ್ ಬಾರವು.

ಪ್ರಯೋಗಂ। ಒಂದೆರಡುಮೂಱು ನಾಲ್ಕೈದಾರೇಳೆಣ್ಟೊಂಬತ್ತುಗಳ್.

## ಬಹುವ್ರೀಹಿ ಸಮಾಸಂ.

೨೮೮ ಅನ್ಯ (ಮತ್ತೊಂದು) ಪದಾರ್ಥವು ಮುಖ್ಯವಾಗಿದ್ದೊಡೆ ಬಹು ವ್ರೀಹಿ ಸಮಾಸವೆನಿಪ್ಪುದು.

ಪ್ರಯೋಗಂ॥ ಅಲರ್ಗಣ್ಣಂ-ಕೂರಿಲಿ-ಕೋಲಾ ಕೋಲಿ.

೨೮೯ ಬಹುವ್ರೀಹಿ ಸಮಾಸವು (೨) ಸಮಾನಾಧಿಕರಣ ಬಹುವ್ರೀಹಿ (೩) ವ್ಯಧಿಕರಣ ಬಹುವ್ರೀಹಿ-ವ್ಯತಿಹಾರ ಲಕ್ಷಣ

---

(೧) ಶ-ಶಾ. ಪಯಿನ್ನೂರು. (೨) ಸಮಾನಾಧಿ ಕರಣವೆಂದರೆ-ಪೂರ್ವೋತ್ತರ ಪದಂಗಳು ವಿಭಕ್ತಿವಚನಾದಿಗಳಲ್ಲಿ ಸಮಾನವಾಗಿರುವುದು.
(೩) ವ್ಯಧಿಕರಣ ವೆಂದರೆ ವ್ಯತ್ಯಸ್ತವಾಗಿರುವುದು.

ಬಹುವ್ರೀಹಿ ಇಂತು ಬಹುವಿಧವಾಗಿರ್ಪುದು.

೬೯ ಬಹುವ್ರೀಹಿಸಮಾಸದಲ್ಲಿ ಉತ್ತರ ಪದಾಂತಕ್ಕೆ ಅಪ್ರತ್ಯಯಂ ಬಹುಳವಾಗಿ ಬರ್ಪುದು. (೧)

ಪ್ರಯೋಗಂ|| ಸಮಾನಾಧಿಕರಣ ಬಹುವ್ರೀಹಿಗೆ-ಕೊಂಕಾದ ಬಿಲ್ ಆವಂಗೊ ಅವಂ, ಕುಡುವಿಲ್ಲಂ-ನಿಡುಗಣ್ಣಂ-ವೆಳ್ಳಿತ್ತಾದ ಎರ್ದೆ ಉಳ್ಳವಳಾವಳೋ ಅವಳ್-ವೆಳ್ಳೆರ್ದೆಯಳ್. ವ್ಯಧಿಕರಣ ಬಹುವ್ರೀಹಿಗೆ—ಉಡಿಯೊಳ್ ತೊವಲುಳ್ಳವನಾವನೊ? ಅವಂ, ಉಡಿದೊವಲಂ, ಬಟ್ಟಗಯ್ಯಂ-ಅಗ್ನಿಗಣ್ಣಂ. ಉಪಮಾನ ಪೂರ್ವಪದ ಬಹುವ್ರೀಹಿಗೆ—ಪೆರೆಯಂತೆ ನೊಸಲುಳ್ಳವನಾವನೋ? ಅವಂ ಪೆರೆನೊಸಲಂ-ಅಲರ್ಗಣ್ಣಂ, ಸೂ. ೬೯.

೭೧ ಉತ್ತರಪದವಾದ ಬಾಗ ಮೊದಲಾದ ಶಬ್ದಂಗಳ ಅಂತ್ಯವರ್ಣಕ್ಕೆ ಇಪ್ರತ್ಯಯಂ ಆದೇಶವಾಗಿ ಬರ್ಪುದು.

ಪ್ರಯೋಗಂ|| ಕಡುಬಾಗಿ ಕಡುಗೆಲಸಿ.

೭೨ ಉತ್ತರಪದವಾದ ಇಲ್ಲ ಶಬ್ದಕ್ಕೆ ಇಲಿ ಎಂಬಾದೇಶವಪ್ಪುದು.

ಪ್ರಯೋಗಂ|| ಪಲ್ಲಿಲ್ಲದುದಾವುದೊ ? ಅದು-ಪಲ್ಲಿಲಿ (ಬಾಯ್) ಕೂರಿಲಿ,

೭೩ ವ್ಯತಿಹಾರಲಕ್ಷಣ ಬಹುವ್ರೀಹಿಯಲ್ಲಿ ಪೂರ್ವಪದಾಂತ್ಯವರ್ಣಕ್ಕೆ ಆಕಾರವುಂ ಉತ್ತರಪದಾಂತ್ಯವರ್ಣಕ್ಕೆ ಇಕಾರವುಂ ಆದೇಶವಾಗಿ ಬರ್ಪುದು.

ಪ್ರಯೋಗಂ||ಹಣೆಯಿಂ ಹಣೆಯಿಂ ಮೊಳ್ಪ ಯುದ್ಧಮೆಾವುದೊ? ಅದು ಹಣಾಹಣಿ. ಕೋಲಾಕೋಲಿ ಕಲ್ಲಾಕಲ್ಲಿ. ದೆಬ್ಬಾದೆಬ್ಬಿ.

---

(೧) ಪೂರ್ವಪದಕ್ಕೆ ವಿಧಿಸಲ್ಪಟ್ಟ ಕಾರ್ಯಂಗಳ್ ಬಹುವ್ರೀಹಿಯಲ್ಲಿ ನಿತ್ಯವೆಂದರಿವುದು.

॥ ದ್ವಂದ್ವಸಮಾಸಂ ॥

೨೯೪ ಪೂರ್ವೋತ್ತರ ಪದಾರ್ಥಂಗಳು ಮುಖ್ಯವಾದೊಡೆ ದ್ವಂದ್ವಸಮಾಸವೆನಿಪ್ಪುದು.

ಪ್ರಯೋಗಂ॥ ಕಾವೆಗಿರಿಸರ್-ತೊರೆಗೆರೆಗಳ್- (೧) ತಂದೆತಾಯ್ಗಳ್.

೨೯೫ ದ್ವಂದ್ವಸಮಾಸದಲ್ಲಿ ಸಮಾನರೂಪವುಳ್ಳ ಪದಂಗಳ್ಗೆ ಸಮಾಸವುಂಟಾದೊಡೆ ಪೂರ್ವಪದ ಲೋಪವಪ್ಪುದು. ॥

ಪ್ರಯೋಗಂ॥ ರಾಮ (ಪರಶುರಾಮ) ನುಂ–ರಾಮ (ಶ್ರೀರಾಮ) ನುಂ. ರಾಮ (ಬಲ) ನುಂ-ರಾಮರ್. ಪೆಣ್ಬಂ-ಪೆಣ್ಬಂ = ಪೆಣ್ಗಳ್-ಗಿಡುಗಳ್.

೨೯೬ ಸರ್ವನಾಮಶಬ್ದಂಗಳೊಡನೆ ದ್ವಂದ್ವಸಮಾಸವಾದರೆ ಸರ್ವನಾಮವಲ್ಲದ ಶಬ್ದಂಗಳ್ಗೆ ಲೋಪವಪ್ಪುದು.

ಪ್ರಯೋಗಂ ॥ ಕಾವನುಂ ಅವನುಂ = ಅವರ್. ಗಿಳಿಯುಂ ಅದುಂ = ಅವು. ಶ್ವೇತೆಯುಂ ಅವಳುಂ = ಅವರ್.

೨೯೭ "ಎರ್" ಶಬ್ದದೊಡನೆ ಸಮಾಸವಾದೊಡೆ "ಎರ್" ಶಬ್ದವೊಂದೇ ಉಳಿವುದು.

ಪ್ರಯೋಗಂ॥ ನೀನುಂ, ಬಳನುಂ, ಆನುಂ = ಆಂಗಳ್. ಅವನುಂ–ನೀನುಂ-ಆನುಂ = ಆಂ.

೨೯೮ "ಎರ್" ಶಬ್ದವಿಲ್ಲದೆಡೆಯುಲ್ಲಿ ನಿರ್ಶಬ್ದದೊಡನೆ ಸಮಾಸವಾದೊಡೆ ನಿರ್ಶಬ್ದವೊಂದೆ ಉಳಿವುದು.

ಪ್ರಯೋಗಂ॥ ಅವನುಂ ತಾನುಂ ನೀನುಂ = ನೀಂಗಳ್. ಆನೆಯುಂ–ತಾನುಂ-ನೀನುಂ = ನೀಂ.

೨೯೯ ಎರ್–ನಿರ್ ಈ ಶಬ್ದಂಗಳಿಲ್ಲದೆಡೆಯುಲ್ಲಿ "ತರ್" ಶಬ್ದದೊಡನೆ ಸಮಾಸವಾದೊಡೆ ತರ್ ಶಬ್ದವೊಂದೆ ಉಳಿವುದು.

---

(೧) ಶ-ಶಾ, ತಂದೆಯುಂ ತಾಯುಂ = ತಂದೆಗಳ್,

ಪ್ರಯೋಗಂ॥ ರಾಯನುಂ, ರಾಣಿಯುಂ, ತಾನುಂ = ತಾಂಗಳ್, ದ್ವಿರುಕ್ತಿಯಲ್ಲಿ ಪೂರ್ವಪದಕ್ಕೆ ಬರ್ಪ ಕಾರ್ಯಂಗಳ್.

೩೦೦ ಕಡೆ-ನಡು" ಶಬ್ದಂಗಳ ಮೊದಲ ಸ್ವರಕ್ಕೆ ಪರವಾದ ವರ್ಣಂಗಳ್ಗೆ "ಟ್ಟ" ಕಾರಾದೇಶವಪ್ಪುದು.

ಪ್ರಯೋಗಂ॥ ಕಡೆ + ಕಡೆ = ಕಟ್ಟಕಡೆ. ನಟ್ಟನಡು.

೩೦೧ "ತುದಿ-ಮೊದಲ್" ಶಬ್ದಂಗಳ ಮೊದಲಸ್ವರಕ್ಕೆ ಪರವಾದ ವರ್ಣಂಗಳ್ಗೆ "ತ್ತ" ಕಾರಾದೇಶವಪ್ಪುದು.

ಪ್ರಯೋಗಂ॥ ತುದಿ + ತುದಿ = ತುತ್ತತುದಿ (೧) ಮೊತ್ತಮೊದಲ್

೩೦೨ ಗುಣವಾಚಕ ಶಬ್ದಂಗಳ ಕಡೆಯ ಪೂರ್ವೋತ್ತರ ಸ್ವರಂಗಳಿಂ ಕೂಡಿದ ವ್ಯಂಜನಕ್ಕೆ ಅಕಾರಾದೇಶವಪ್ಪುದು.

ಪ್ರಯೋಗಂ॥ ತೋರತೋರಮುಡಿಗಳ್—ಚಿಕ್ಕಚಿಕ್ಕ ಮನೆಗಳ್,

೩೦೩ ಅವ್ಯಯಂಗಳ ಕಡೆಯ "ಗೆ-ನೆ" ಎಂಬ ವರ್ಣಂಗಳ್ಗೆ ಲೋಪವಪ್ಪುದು.

ಪ್ರಯೋಗಂ॥ ಮೆಲ್ಲಗೆ + ಮೆಲ್ಲಗೆ = ಮೆಲ್ಲಮೆಲ್ಲಗೆ, ಕಮ್ಮಕಮ್ಮಗೆ, ಸುಮ್ಮನೆ + ಸುಮ್ಮನೆ = ಸುಮ್ಮ ಸುಮ್ಮನೆ, ಬಿಮ್ಮ ಬಿಮ್ಮನೆ.

೩೦೪ (೨) ಕೆಲವೆಡೆಗಳಲ್ಲಿ 'ಗು' ಶಬ್ದಾಂತವಾದ ಧಾತುಗಳ ಮತ್ತುಂ ಕೆಳಗು ಶಬ್ದದ "ಗು" ಶಬ್ದಕ್ಕೆ ಲೋಪವಪ್ಪುದು.

ಪ್ರಯೋಗಂ॥ ತೊಳಗು + ತೊಳಗು = ತೊಳತೊಳಗು, ಬೆಳಬೆಳಗು, ಕೆಳಗು + ಕೆಳಗು = ಕೆಳಕೆಳಗು.

ಇಂತು ಸಮಾಸಪ್ರಕರಣಂ ಮುಗಿದುದು.

---

(೧) ಶ-ಶಾ, ಮೊದಮೊದಲ್,

(೨) ಶ-ಶಾ, ಮೇಮೇಗೆ-ಮೂಮೂಗು,

# ತದ್ಭವಪ್ರಕರಣಂ.

(ಈ ಪ್ರಕರಣದಲ್ಲಿ ಹೇಳಲ್ಪಡುವ ಕಾರ್ಯಂಗಳು ಪೂರ್ವಪದಕ್ಕೆ ಬಾರವು.) ಸೂ. ೩೫೮

೩೦೫ ಸಂಸ್ಕೃತಶಬ್ದವು ವಿಕೃತಿಯಂ ಪಡೆದು ಪ್ರಯೋಗಿಸಲ್ಪಟ್ಟರೆ ತದ್ಭವವೆನಿಪ್ಪುದು.

೩೦೬ ಶಬ್ದಾಂತವಾದ ಅಕಾರಕ್ಕೆ ವಿಕಲ್ಪವಾಗಿ ಉಕಾರಾದೇಶವಪ್ಪುದು. *

ಪ್ರಯೋಗಂ ॥ ಪ್ರಪಂಚಂ-ಪ್ರಪಂಚು, ಮಂಥ-ಮಂತು, ಕಾಚಂ-ಗಾಜು, ಬಿರುದ, ದಂಡ, ರೂಪ ಮೊದಲಾದುವು.

೩೦೭ ಶಬ್ದಾಂತವಾದ ಅಕಾರಕ್ಕೆ ವಿಕಲ್ಪವಾಗಿ ಎಕಾರಾದೇಶವಪ್ಪುದು.

ಪ್ರಯೋಗಂ ॥ ದರ್ಭಂ-ದರ್ಭೆ, ಅಕ್ಷತಂ-ಅಕ್ಷತೆ, ಶಾಣ, ಹಂಸ, ಫಲಕ, ಉದಾಹರಣ, ಘೂಕ, ಕೋಣ, ಪರತ್ರ.

೩೦೮ ಪಾತ್ರಶಬ್ದಾಂತವಾದ ಅಕಾರಕ್ಕೆ ನಪುಂಸಕಲಿಂಗದಲ್ಲಿ ವಿಕಲ್ಪವಾಗಿ ಎಕಾರಾದೇಶವಪ್ಪುದು.

ಪ್ರಯೋಗಂ ॥ ಪಾತ್ರಂ-ಪಾತ್ರೆ, ಪಾತ್ರೆಗಳ್.

೩೦೯ ಶಬ್ದಾದಿಯಾದ ಇಕಾರಕ್ಕಂ ಶಬ್ದಾಂತವಾದ ಇಕಾರಕ್ಕಂ ಬಹುಳವಾಗಿ ಎಕಾರಾದೇಶವಪ್ಪುದು.

ಪ್ರಯೋಗಂ ॥ ಇಳಾ-ಎಳೆ, ಸಿರಾ-ಸೆರೆ, ದಶಮಿ-ದಸಮೆ, ಅಮರಿ-ಅವರೆ.

೩೧೦ ಸಖಿ ಶಬ್ದಾಂತ ಇಕಾರಕ್ಕೆ ಅಕಾರಾದೇಶವಾದೊಡಂ

---

* ೩೦೬-೭-೯-೧೧-೧೩-೧೮-೧೯-೨೧-೩೨೩ ಈ ಸೂತ್ರಂಗಳಲ್ಲಿ ಉದಾಹರಿಸಲ್ಪಟ್ಟ ಶಬ್ದಂಗಳಂ ಗಣ (ಸಜಾತೀಯಶಬ್ದಂಗಳಗುಂಪು) ವೆಂದು ತಿಳಿವುದು.

ಆಯ (೧) ಎಂಬಾದೇಶವಾದೊಡಂ ಬರ್ಪುದು.

ಪ್ರಯೋಗಂ ॥ ಸಖಿ + ಅಂ = ಸಖಂ, ಸಖಾಯಂ.

೩೧೧ ಶಬ್ದಾದಿ ವರ್ಣಕ್ಕೆ ಪರವಾದ ಉಕಾರಕ್ಕೆ ಆದೇಶವಾಗಿ ಒಕಾರವಾದೊಡಂ ಓಕಾರವಾದೊಡಂ ಬಹುಳವಾಗಿ ಬರ್ಪುದು.

ಪ್ರಯೋಗಂ ॥ ಮುಖಂ-ಮೊಗಂ, ಸುಖಂ-ಸೊಗಂ. ಸುವಾಸಿನಿ-ಸೋವಾಸಿಣಿ, ಕುರಂಟಿ-ಗೋರಂಟಿ.

೩೧೨ ಶಬ್ದಾದಿಯಾದ ಋಕಾರಕ್ಕೆ ವಿಕಲ್ಪವಾಗಿ ರಿ ಶಬ್ದಾದೇಶವಪ್ಪುದು.

ಪ್ರಯೋಗಂ ॥ ಋತು-ರಿತು, ಋಷಿ-ರಿಸಿ, ಋಣ-ರಿಣ.

೩೧೩ ಮೃಗ ಮೊದಲಾದ ಶಬ್ದಂಗಳ ಆದಿವರ್ಣಕ್ಕೆ ಪರವಾದ ಋಕಾರಕ್ಕೆ ವಿಕಲ್ಪವಾಗಿ ಇಕಾರಾದೇಶವಪ್ಪುದು.

ಪ್ರಯೋಗಂ ॥ ಮೃಗಂ-ಮಿಗಂ, ಭೃಂಗಂ-ಬಿಂಗಂ, ಧೃಷ್ಟಂ-ದಿಟ್ಟಂ.

೩೧೪ * ಶಬ್ದಾಂತವಾದ ಋಕಾರಕ್ಕೆ ಪುಲ್ಲಿಂಗದಲ್ಲಿ ವಿಕಲ್ಪವಾಗಿ ಅಕಾರಾದೇಶವಪ್ಪುದು.

ಪ್ರಯೋಗಂ ॥ ಪಿತಂ-ಪಿತೃ, ನಪ್ತಂ-ನಪ್ತೃ, ಮಾಂಧಾತಂ-ಮಾಂಧಾತೃ

೩೧೫ ಬ್ರಹ್ಮನೆಂಬ ಅರ್ಥವುಳ್ಳ ವಿಧಾತೃಶಬ್ದದ ಋಕಾರಕ್ಕೆ ಅಕಾರಾದೇಶವಿಲ್ಲ, ಆದೊಡೆ ವಿಕಲ್ಪವಾಗಿ ರಶಬ್ದಾದೇಶವಪ್ಪುದು.

ಪ್ರಯೋಗಂ ॥ ವಿಧಾತ್ರಂ-ವಿಧಾತೃ.

೩೧೬ ಶಬ್ದಾಂತವಾದ ಋಕಾರಕ್ಕೆ ಬಹುಳವಾಗಿ "ಅರ" ಎಂಬಾದೇಶವಪ್ಪುದು.

ಪ್ರಯೋಗಂ ॥ ಪಿತರಂ-ಪಿತೃ ಪಿತಂ, ಮಾತರಂ-ಮಾತೃ.

---

(೧) ಕ-ಭಾ-ಅಕಾರಾದೇಶವಿಲ್ಲ.

* ಶ-ಶಾ-ದಾತೃ-ಮಾಂಧಾತೃ ಶಬ್ದಂಗಳ ಋಕಾರಕ್ಕೆ ಅಕಾರಾದೇಶವಪ್ಪುದು.

೩೧೭ ಮಾತೃಶಬ್ದಾಂತವಾದ ಋಕಾರಕ್ಕೆ ವಿಕಲ್ಪವಾಗಿ ಎಕಾರಾದೇಶವಪ್ಪುದು. ಪ್ರಯೋಗಂ॥ ಮಾತೃ-ಮಾತೆ, ಮಾತರಂ.

೩೧೮ ತೃಪ್ರತ್ಯಯಾಂತವಾದ ಶಬ್ದದಕಡೆಯ ಋಕಾರಕ್ಕಂ ಸ್ವಸೃ-ನಪ್ತೃ-ನೇಷ್ಟೃ-ತ್ವಷ್ಟೃ-ಕ್ಷತ್ತೃ-ಹೋತೃ-ಪೋತೃ-ಪ್ರಶಾಸ್ತೃ ಈ ಶಬ್ದಂಗಳ ಕಡೆಯ ಋಕಾರಕ್ಕಂ ವಿಕಲ್ಪವಾಗಿ ಅಕಾರಾದೇಶವುಂ ಆಕಾರಾದೇಶವುಂ ಬರ್ಪುವು.

ಪ್ರಯೋಗಂ ॥ ಭರ್ತಂ-ಭರ್ತಾರಂ-ಭರ್ತೃ-ಹೋತಂ-ಹೋತಾರಂ ಹೋತೃ.

೩೧೯ ಕೀಲ ಮೊದಲಾದ ಶಬ್ದಂಗಳ ಕಡೆಯಣ ಸ್ವರಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ ॥ ಕೀಲ-ಕೀಲ್, ಕೀರ-ಕೀರ್, ನೀರ-ನೀರ್, ಪಿಸುಣ್-ಪಿಶುನ, ಪ್ರಮಾಣ-ಪವಣ್, ಆಕರ=ಅಗರ್, ಕೂರ, ವಿಮಾನ, ಶರಣ,

೩೨೦ * ಸಹಜವಾಗಿ ಅನೇಕ ಸ್ವರವುಳ್ಳ ಶಬ್ದಂಗಳ ಕಡೆಯ ದೀರ್ಘಕ್ಕೆ ಹ್ರಸ್ವಾದೇಶವಪ್ಪುದು.

ಪ್ರಯೋಗಂ ॥ ಲಕ್ಷ್ಮೀ-ಲಕ್ಷ್ಮಿ, ವಾಣಿ, ಗೌರಿ, ವಧು, ( ಇವು ತತ್ಸಮ ಶಬ್ದಂಗಳೆಂದು ಕೆಲರೆಂಬರ್.)

೩೨೧ ವೃಕ್ಷವಾಚಕವಾದ ರಂಭಾಶಬ್ದದ ಆಕಾರಕ್ಕಂ ಕರುಣಾದಿ ಶಬ್ದಾಂತವಾದ ಆಕಾರಕ್ಕಂ ಹ್ರಸ್ವಾದೇಶವಪ್ಪುದು.

ಪ್ರಯೋಗಂ ॥ ರಂಭಾ-ರಂಭಂ, ಕರುಣಾ-ಕರುಣಂ, ದಂಷ್ಟ್ರಾ-ಕಂಧರಾ

೩೨೨ * ಸಹಜವಾಗಿ ಅನೇಕ ಸ್ವರವುಳ್ಳ ಶಬ್ದಾಂತವಾದ ಆಕಾರಕ್ಕೆ ಎಕಾರಾದೇಶವಪ್ಪುದು.

ಪ್ರಯೋಗಂ ॥ ರಮಾ-ರಮೆ, ಶಾರದೆ, ಲತೆ, ಶಯ್ಯೆ.

೩೨೩ ಪುಂಸ್ತ್ರೀಲಿಂಗಂಗಳಲ್ಲಿ ಪ್ರಥಮಾಬಹುವಚನಾಂತವಾ

---

* ದೀರ್ಘಾಂತವಾದ ಈಜಾತಿಯ ಸಂಸ್ಕೃತ ಶಬ್ದಂಗಳ್ಗೆ ಕನ್ನಡದಲ್ಲಿ ಪ್ರಯೋಗವಿಲ್ಲ.

ದ ವ್ಯಂಜನಾಂತಶಬ್ದಂಗಳ ಕಡೆಯ ವಿಸರ್ಗಕ್ಕೆ ಲೋಪವಪ್ಪುದು.

ಪ್ರಯೋಗಂ ‖ ಭಗವಂತಃ-ಭಗವಂತಂ, ವಿದ್ವಾಂಸಂ, ದಿವಂ.

೩೦೪ * ಸಕಾರಾಂತವಲ್ಲದ ಶಬ್ದಾಂತವಾದ ವ್ಯಂಜನಂಗಳ್ಗೆ ಲೋಪವಾಗದ ಪಕ್ಷದಲ್ಲಿ ಆ ವ್ಯಂಜನಕ್ಕೆ ಪರವಾಗಿ ಉಕಾರಾಗಮ ವಪ್ಪುದು.

ಪ್ರಯೋಗಂ ‖ ವಾಕ್- ವಾಕ್ಕು, ದಿಕ್ಕು, ಅಪ್ಪು, ಮರುತ್ತು, ಪರೀಕ್ಷಿತ್ತು, ಜಗತ್ತು, ಮನಸ್ಸು, ಶ್ರೇಯಸ್ಸು ಮೊದಲಾದುವು.

೩೦೫ ನಕಾರಾಂತ ಶಬ್ದಂಗಳಕಡೆಯ ವರ್ಣಕ್ಕೆ ಲೋಪ ವಪ್ಪುದು.

ಪ್ರಯೋಗಂ ‖ ರಾಜನ್-ರಾಜಂ. ಕರಿ. ದಂಡಿ ಗುಣಿ.

೩೦೬ † ಋಭುಕ್ಷನ್ ಮೊದಲಾದ ಶಬ್ದಂಗಳ ಅಂತ್ಯವರ್ಣ ಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ ‖ ಋಭುಕ್ಷನ್-ಋಭುಕ್ಷಂ-ಋಭುಕ್ಷಾಣಂ. ಅಧ್ವಂ-ಅಧ್ವಾನಂ, ಯುವಂ-ಯುವಾನಂ, ಮಘುವಾನಂ-ಮಘುವಂ.

೩೦೭ ಶ್ವನ್-ಪಥಿನ್-ಮಥಿನ್ ಶಬ್ದಂಗಳ ಅಂತ್ಯವರ್ಣಕ್ಕೆ ಲೋಪವಿಲ್ಲ.

ಪ್ರಯೋಗಂ ‖ ಶ್ವನ್-ಶ್ವಾನಂ. ಪಂಥಾನಂ-ಮಂಥಾನಂ.

೩೦೮ ಸಕಾರಾಂತವಾದ ಶಬ್ದಂಗಳ ಅಂತ್ಯವರ್ಣಕ್ಕೆ ವಿಕ ಲ್ಪವಾಗಿ ಲೋಪವಪ್ಪುದು.

ಪ್ರಯೋಗಂ ‖ ಮನಸ್-ಮನಂ-ಮನಸ್ಸು. ಯಶಂ-ಯಶಸ್ಸು. ಶ್ರೇಯಂ ಶ್ರೇಯಸ್ಸು. ಆಯು-ಆಯುಸ್ಸು.

---

* ಶ-ಶಾ-ವಾಕ್-ಮಹತ್ ಮೊದಲಾದ ಶಬ್ದಂಗಳ್ಗೆ ಸಂಸ್ಕೃತ ಪ್ರಥಮೈಕವಚನರೂಪಮುಂ ಬರ್ಪುದು.

† ಕ-ಭಾ. ಯುವನ್-ಅಧ್ವನ್ ಶಬ್ದಂಗಳ ನಕಾರಕ್ಕೆ ಲೋಪವಿಲ್ಲ.

೬೫೯ ವರ್ಗ ಪ್ರಥಮ ಚತುರ್ಥಾಕ್ಷರಂಗಳ್ಗೆ ವಿಕಲ್ಪವಾಗಿ ವರ್ಗತೃತೀಯ ವರ್ಣಾದೇಶವಪ್ಪುದು.

ಪ್ರಯೋಗಂ॥ ಮಲ್ಲಿಕಾ-ಮಲ್ಲಿಗೆ, ಡಮರುಕಂ-ಡಮರುಗಂ, ಸೂಚಿ ಸೂಜಿ, ವಚೆ-ಬಜೆ, ಕೋಟ-ಗೋಡೆ, ಅಟವಿ-ಅಡವಿ, ಜಾತಿ-ಜಾದಿ, ದೂತಿ-ದೂದಿ, ಮೊಖು-ಮೊಗಿ, ಮೊಗ, ಘಂಟಾ-ಗಂಟೆ, ಝಷ-ಜಸ, ಝರಿ-ಜರಿ, ಗಾಢ-ಗಾಡ, ದೃಢ-ದಿಡ, ಧನ-ದನ, ನಿಧಿ-ನಿದಿ, ಭಯ-ಬಯ, ಸಭಾ-ಸಬೆ.

೬೬೦ ವರ್ಗದ್ವಿತೀಯ ವರ್ಣಂಗಳ್ಗೆ ಬಹುಳವಾಗಿ ವರ್ಗ ಪ್ರಥಮವರ್ಣಾದೇಶವಪ್ಪುದು.

ಪ್ರಯೋಗಂ ॥ ಖಲಂ-ಕಳಂ. ಖಂಡಂ-ಕಂಡಂ. ಛಂದಂ-ಚಂದಂ. ಛನ್ನಂ-ಚನ್ನಂ. ಕಂಠಿಕಾ-ಕಂಟಿಕೆ. ಕಂಥಾ-ಕಂತೆ. ಕಥಾ-ಕತೆ.

೬೬೧ ಖಕಾರಕ್ಕೆ ಬಹುಳವಾಗಿ ಗಕಾರಾದೇಶವಪ್ಪುದು.

ಪ್ರಯೋಗಂ ॥ ಸುಖಂ-ಸೊಗಂ. ಮುಖಂ-ಮೊಗಂ.

೬೬೨ ಟ-ತ-ಡಕಾರಂಗಳ್ಗೆ ಬಹುಳವಾಗಿ ಳಕಾರಾದೇಶ ವಪ್ಪುದು.

ಪ್ರಯೋಗಂ ॥ ಘಟಿಕಾ-ಗಳಿಗೆ. ಘುಟಿಕಾ-ಗುಳಿಗೆ. ಪೀಠಿಕಾ-ಪೀಳಿಗೆ. ಮಠಿಕಾ-ಮಳಿಗೆ. ದಾಡಿಮ-ದಾಳಿಂಬ.

೬೬೩ ಹನುಮತ್-ಜಗತ್ ಈ ಶಬ್ದಂಗಳ ತಕಾರಕ್ಕೆ ವಿಕಲ್ಪ ವಾಗಿ ಲೋಪವಪ್ಪುದು.

ಪ್ರಯೋಗಂ ॥ ಹನುಮಂ-ಹನುಮಂತಂ. ಜಗಂ-ಜಗತ್ತು.

೬೬೪ ಧ್ಯಾನ ಮೊದಲಾದ ಶಬ್ದಂಗಳ ಧಕಾರಕ್ಕೆ ವಿಕಲ್ಪ ವಾಗಿ ಲೋಪವಪ್ಪುದು. ಸೂ-೬೬೮-೬೪೫

ಪ್ರಯೋಗಂ ॥ ಧ್ಯಾನ-ಜಾನ. ಸಂಧ್ಯಾ-ಸಂಜೆ. ವಂಧ್ಯಾ-ಬಂಜೆ. ವಿಂಧ್ಯ-ಬಿಂಜ.

೩೩೫ ನಕಾರಕ್ಕೆ ಬಹುಳವಾಗಿ ಣಕಾರಾದೇಶವಪ್ಪುದು.

ಪ್ರಯೋಗಂ ॥ ಖನಿ-ಗಣಿ. ಶುನಕ—ಸೊಣಗ. ಸ್ಥಾನ—ಠಾಣ.

೩೩೬ ಪಕಾರಕ್ಕೆ ಹಕಾರಾದೇಶವುಂ ವಕಾರಾದೇಶವುಂ ಬಹುಳವಾಗಿ ಬರ್ಪುವು.

ಪ್ರಯೋಗಂ ॥ ಪಿಶುನ-ಹಿಸುಣ. ಪಿಸುಣ್—ಪರವಶ-ಹರವಸ. ದೀಪಿಕಾ-ದೀವಿಗೆ. ಕೂಪ-ಕೂವೆ.

೩೩೭ ಬಕಾರಮಕಾರಂಗಳ್ಗೆ ಬಹುಳವಾಗಿ ವಕಾರಾದೇಶವಪ್ಪುದು.

ಪ್ರಯೋಗಂ ॥ ಕಬಳಂ-ಕವಳಂ. ಶಿಬಿಕಾ-ಸಿವಿಗೆ. ಕಾಮಂ-ಕಾವಂ. ಯಾಮಂ-ಜಾವಂ.

೩೩೮ ಯಕಾರಕ್ಕೆ ಬಹುಳವಾಗಿ ಜಕಾರಾದೇಶವಪ್ಪುದು.

ಪ್ರಯೋಗಂ ॥ ಯೋಗಿ-ಜೋಗಿ. ಯತಿ-ಜತಿ. ಯಶಂ—ಜಸಂ.

೩೩೯ ರೇಫಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ ವಿಕಲ್ಪವಾಗಿ ರೇಫಕ್ಕೆ ಲೋಪವಾಗಿ ಪರವಾದ ವ್ಯಂಜನಕ್ಕೆ ದ್ವಿತ್ವಮಪ್ಪುದು.

ಪ್ರಯೋಗಂ ॥ ವರ್ಗಂ-ವಗ್ಗಂ, ಅರ್ಘಂ-ಅಗ್ಗಂ, ವರ್ತಿ-ಬತ್ತಿ.

೩೪೦ ಸಂಯುಕ್ತಾಕ್ಷರಂಗಳಲ್ಲಿ ವ್ಯಂಜನಕ್ಕೆ ಪರವಾದ ರೇಫಕ್ಕೆ ಕೆಲವೆಡೆಗಳಲ್ಲಿ ಲೋಪವುಂ ಕೆಲವೆಡೆಗಳಲ್ಲಿ ಪೂರ್ವವರ್ಣಾದೇಶಮುಂ ಬಹುಳವಾಗಿ ಬರ್ಪುವು.

ಪ್ರಯೋಗಂ ॥ ದ್ರೋಣಿ-ದೋಣಿ, ಪ್ರಸರಂ-ಪಸರಂ, ಪೂರ್ವವರ್ಣಾದೇಶಕ್ಕೆ-ಮುದ್ರಿಕಾ ಮುದ್ದಿಗೆ, ವೇತ್ರಂ-ಬೆತ್ತಂ.

೩೪೧ ಸಂಯುಕ್ತಾಕ್ಷರಂಗಳಲ್ಲಿ ರೇಫಕ್ಕೆ ಪರದಲ್ಲಿ ಷಕಾರವಿರ್ದೊಡೆ ಆ ರೇಫ-ಷಕಾರಂಗಳ ನಡುವೆ ವಿಕಲ್ಪವಾಗಿ ಇಕಾರಾಗಮವಪ್ಪುದು.

ಪ್ರಯೋಗಂ ॥ ಹರ್ಷಂ-ಹರಿಸಂ, ಸರ್ಷಪಂ-ಸರಿಸಪಂ.

೩೪೨ ಸಂಯುಕ್ತಾಕ್ಷರಂಗಳಲ್ಲಿ ರೇಫಕ್ಕೆ ಪರದಲ್ಲಿ ಹಕಾರ ವಿರ್ದೊಡೆ ಆ ರೇಫ ಹಕಾರಂಗಳ ನಡುವೆ ವಿಕಲ್ಪವಾಗಿ, ಉಕಾರಾಗಮವಪ್ಪುದು.

ಪ್ರಯೋಗಂ ॥ ದಾಶಾರ್ಹಂ-ದಾಶಾರುಹಂ, ಬರ್ಹಂ—ಬರುಹಂ.

೩೪೩ ದುರ್ ಎಂಬ ಉಪಸರ್ಗಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ ಅವುಗಳ ನಡುವೆ ಬಹುಳವಾಗಿ ಉಕಾರಾಗಮವಪ್ಪುದು.

ಪ್ರಯೋಗಂ ॥ ದುರ್ಮತಿ—ದುರುಮತಿ, ದುರ್ಜನಂ-ದುರುಜನಂ.

೩೪೪ ಲಕಾರಕ್ಕೆ ವಿಕಲ್ಪವಾಗಿ ಳಕಾರಾದೇಶವಪ್ಪುದು.

ಪ್ರಯೋಗಂ ॥ ಫಲಂ—ಪಳಂ, ತಿಲಂ-ತಿಳಂ, ಜಲಂ—ಜಳಂ.

೩೪೫ ವಕಾರಕ್ಕೆ ಬಹುಳವಾಗಿ ಬಕಾರಾದೇಶವಪ್ಪುದು.

ಪ್ರಯೋಗಂ ॥ ವಸಂತಂ—ಬಸಂತಂ, ವೀಣಾ-ಬೀಣೆ, ವಾಲಂ-ಬಾಲಂ.

೩೪೬ ಶಕಾರ ಷಕಾರಂಗಳ್ಗೆ ವಿಕಲ್ಪವಾಗಿ ಸಕಾರಾದೇಶವಪ್ಪುದು.

ಪ್ರಯೋಗಂ ॥ ಶಾಂತಂ-ಸಾಂತಂ, ಶಶಿ—ಸಸಿ, ವೇಷಂ-ವೇಸಂ, ನಿಮಿಷಂ-ನಿಮಿಸಂ.

೩೪೭ ಕಕಾರಕ್ಕೆ ಪರದಲ್ಲಿರುವ "ಷಕಾರಕ್ಕೆ ಪರದಲ್ಲಿ ದೀರ್ಘಸ್ವರವಿರ್ದೊಡೆ" ಷಕಾರಕ್ಕೆ ಬಹುಳವಾಗಿ ಲೋಪವಪ್ಪುದು.

ಪ್ರಯೋಗಂ ॥ ಕ್ಷೀರಂ—ಕೀರಂ. ಕ್ಷಾರಂ-ಕಾರಂ.

೩೪೮ ಕಕಾರಕ್ಕೆ ಪರವಾದ "ಷ"ಕಾರಕ್ಕೆ ಪರದಲ್ಲಿ ಹ್ರಸ್ವ ಸ್ವರಮಿರ್ದೊಡೆ ಬಹುಳವಾಗಿ ಪೂರ್ವವರ್ಣಾದೇಶಮಪ್ಪುದು.

ಪ್ರಯೋಗಂ ॥ ಅಕ್ಷರಂ—ಅಕ್ಕರಂ, ಲಕ್ಷಣಂ-ಲಕ್ಕಣಂ.

೩೮೯ ಸಾಕ್ಷಿ ಮೊದಲಾದ ಶಬ್ದಂಗಳ ಆದಿದೀರ್ಘಕ್ಕೆ ಬಹುಳವಾಗಿ ಹ್ರಸ್ವಾದೇಶವಪ್ಪುದು.

ಪ್ರಯೋಗಂ ॥ ಸಾಕ್ಷಿ-ಸಕ್ಕಿ, ಕಾರ್ಯ-ಕಜ್ಜ, ಕಾಂಸ್ಯ-ಕಂಚು.

೩೯೦ ಆದ್ಯಕ್ಷರವಾದ ಸಕಾರಕ್ಕೆ ಪರದಲ್ಲಿ ವ್ಯಂಜನವಿರ್ದೊಡೆ ಪೂರ್ವವರ್ಣಕ್ಕೆ ಬಹುಳವಾಗಿ ಲೋಪವಪ್ಪುದು.

ಪ್ರಯೋಗಂ ॥ ಸ್ಥಾನ-ತಾಣ, ಸ್ಥಿತಿ-ತಿತಿ, ಸ್ತುತಿ-ತುತಿ.

೩೯೧ ಸಕಾರ ಶಕಾರಂಗಳ್ಗೆ ಪರವಾದ ವಕಾರಕ್ಕೆ ಬಹುಳವಾಗಿ ಲೋಪವಪ್ಪುದು.

ಪ್ರಯೋಗಂ॥ ಸ್ವಾಮಿ-ಸಾಮಿ, ತಪಸ್ವಿ-ತವಸಿ, ಈಶ್ವರಂ-ಈಸರಂ, ಶಾಶ್ವತಂ-ಶಾಸತಂ.

೩೯೨ ಸಂಯುಕ್ತಾಕ್ಷರಂಗಳಲ್ಲಿ ಸಕಾರ ಷಕಾರಂಗಳ್ಗೆ ಪರದಲ್ಲಿ ವ್ಯಂಜನವಿರ್ದೊಡೆ ಬಹುಳವಾಗಿ ಸಕಾರ ಷಕಾರಂಗಳ್ಗೆ ಪರವರ್ಣಾದೇಶವಪ್ಪುದು.

ಪ್ರಯೋಗಂ ॥ ತಸ್ಕರಂ-ತಕ್ಕರಂ, ಮಸ್ಕರಿ-ಮಕ್ಕರಿ, ಶಷ್ಕುಲಿ-ಚಕ್ಕುಲಿ, ದೃಷ್ಟಿ-ದಿಟ್ಟಿ.

೩೯೩ ಆದ್ಯಕ್ಷರವಾದ ಹಕಾರಕ್ಕೆ ಬಹುಳವಾಗಿ ಅಕಾರಾದೇಶವಪ್ಪುದು.

ಪ್ರಯೋಗಂ ॥ ಹನುಮಂ-ಅನುಮಂ, ಹಾರಂ-ಆರಂ,

೩೯೪ ಶ್ರೀ =ಸಿರಿ, ಹ್ರೀ =ಹಿರಿ, ಕಂಟಕ =ಕಂಟೆಯ, ಕನ್ಯಾ= ಕನ್ನೆ, ಕಾಂಸ್ಯ =ಕಂಚು, ತ್ಯಾಗ =ಚಾಗ, ಸತ್ಯ =ಸಚ್ಚ, ಚೂರ್ಣ= ಸುಣ್ಣ, ಸ್ವರ್ಣ = ಸೊನ್ನೆ, ರತ್ನ = ರನ್ನ, ಚಂದ್ರ = ಚಂದಿರ, ಚಂದರ. ಮದನ = ಮಯಣ, ದ್ವಿಕ =ದುಗ, ದೂಗ. ತ್ರಿಕ = ತಿಗ, ತೀಗ. ಚತುಷ್ಕ = ಚೌಕ, ವಕ್ರ = ವಂಕ, ಬ್ರಹ್ಮ = ಬೊಮ್ಮ, ಸಿಂಹ = ಸಿಂಗ, ಮನುಷ್ಯ = ಮಾನಿಸ, ಮುಕ್ತಿ = ಮುಕುತಿ, ಅಂತಃಪುರ = ಅಂತವುರ, ಮಹಾಕಾಳಿ =ಮಾಕಾಳಿ,(ಸೂ೨೬೩) ಮಹಾಸಾಮಂತ= ಮಾಸಾಮಂತ,

ಕರ್ಣಪೂರ= ಕನ್ನವುರ, ಕಾಸ್ಯಶಾಳೆ = ಕಂಸಾಳೆ, ಕ್ಷೀರಾಗಾರ, ಕೀಲಾರ, ದೇವಾಗಾರಂ= ದೇವಾರಂ, ಧವಳಾಗಾರಂ = ಧವಳಾರಂ, ಧವಳಹಾರಂ— ಧವಳಾರಂ, ದೀಪಾವಳಿಕಾ= ದೀವಳಿಗೆ, ದೇವಕುಲಂ= ದೇಗುಲಂ, ದೇಶಶಿಖಾ = ದೇಶಾಕೆ, ಶ್ರೀದ್ವಾರಂ= ಸೀಯುದರಂ, ಸೀಯುದಾರಂ, ಸೀಯುಬಾರಂ॥ ಕೆಲವು ಪ್ರಾಕೃತ ವ್ಯಾಕರಣೋಕ್ತವಾದ ತದ್ಭವಶಬ್ದಂಗಳ್ಗಂ ಕನ್ನಡದಲ್ಲಿ ಪ್ರಯೋಗವುಣ್ಟು, ಅವಂ ತದ್ಭವಂಗಳಿಂದರಿವುದು.

ಪ್ರಯೋಗಂ ॥ ಕುಮಾರ—ಕುಮರ, ಆರ್ಯ-ಅಯ್ಯ.

---

## ¶ ತ್ರಿಜನ್ತಪ್ರಕರಣಂ.

೩೫೫ ಕರ್ತ್ರರ್ಥದಲ್ಲಿಯುಂ ಕರ್ಮಾರ್ಥದಲ್ಲಿಯುಂ ಕಾಲತ್ರಯದಲ್ಲಿಯುಂ ಧಾತುಗಳ್ಗೆ ಪ್ರಥಮಪುರುಷೈಕವಚನದಲ್ಲಿ 'ಅಮ್' ಪ್ರತ್ಯಯಮುಂ ಬಹುವಚನದಲ್ಲಿ 'ಅರ್' ಪ್ರತ್ಯಯಮುಂ. ಮಧ್ಯಮಪುರುಷೈಕವಚನದಲ್ಲಿ 'ಅಯ್' ಪ್ರತ್ಯಯಮುಂ ಬಹುವಚನದಲ್ಲಿ 'ಇರ್' ಪ್ರತ್ಯಯಮುಂ ಉತ್ತಮಪುರುಷೈಕವಚನದಲ್ಲಿ 'ಎನ್ ಏಂ' ಪ್ರತ್ಯಯಂಗಳುಂ ಬಹುವಚನದಲ್ಲಿ 'ಎವು' ಪ್ರತ್ಯಯಮುಂ ಬರ್ಪುವು. (ಸೂ-೯) *

ಪ್ರಯೋಗಂ॥ಕರ್ತ್ರರ್ಥಕ್ಕೆ-ಮಾಡಿದಂ—ಮಾಡಿದರ್, ಮಾಡಿದಯ್- ಮಾಡಿದಿರ್—ಮಾಡಿದೆಂ, ಮಾಡಿದೇಂ—ಮಾಡಿದೆವು.

---

¶ "ತ್ರಿಜ್" ಎಂದರೆ ಪ್ರಥಮ ಮಧ್ಯಮೋತ್ತಮ ಪುರುಷ ಪ್ರತ್ಯಯಂಗಳ್. * ಷಟ್ಪದಿಯಲ್ಲಿ ಅಮ್, ಅಳ್ (೩೬೭) ಅರ್, ಎಂ, ಈ ಪ್ರತ್ಯಯಂಗಳ್ಗೆ ಪರವಾಗಿ ಉಕಾರಾಗಮವುಂ, ಇರ್, ಪ್ರತ್ಯಯಕ್ಕೆ ಪರವಾಗಿ ಇಕಾರಾಗಮವುಂ, ಅಮ್ ಪ್ರತ್ಯಯದ ಮಕಾರಕ್ಕೆ ಲೋಪವುಂ ವಿಕಲ್ಪವಾಗಿ ಬರ್ಪುವು. ಪ್ರ ॥ ಎಂದಂ, ಎನ್ದ, ಎನ್ದನು, ಎನ್ದಳ್, ಎಂದಳು. ಸಾರ್ದರ್, ಸಾರ್ದರು. ನುಡಿದೆಂ, ನುಡಿದೆನು, ಮಾಡಿದಯ್, ಮಾಡಿದೆ. ಅಂತಿರ್, ಅಂತಿರಿ. (೧) ಕ, ಭಾ, ಎವ್.

ಕರ್ಮಾರ್ಥಕ್ಕೆ-ಪೇಳಲ್ಪಟ್ಟಂ-ಪೇಳಲ್ಪಟ್ಟರ್, ಪೇಳಲ್ಪಟ್ಟಳ್-ಪೇಳಲ್ಪಟ್ಟರ್-ಪೇಳಲ್ಪಟ್ಟಂ-ಪೇಳಲ್ಪಟ್ಟವು.

೩೫೬ ಕರ್ಮಾರ್ಥದಲ್ಲಿ (೧) ಧಾತುವಿಂಗೆ ಪರವಾಗಿ "ಪಡು" ಎಂಬಧಾತು ಆಗಮವಾಗಿ ಅಪ್ಪುದು.

ಪ್ರಯೋಗಂ॥ ಮಾಡಲ್ಪಟ್ಟುದು-ಪೇಳಲ್ಪಟ್ಟತ್ತು.

೩೫೭ ಧಾತುಗೆ ಪರದಲ್ಲಿ ಪಡುಧಾತುವಿರ್ದೊಡೆ ಆ ಧಾತುಗಳ ನಡುವೆ " ಎ (ಪೋಣ್) ಅಲ್ " ಎಂಬ ಆಗಮಂಗಳಪ್ಪುವು.

ಪ್ರಯೋಗಂ॥ ಮಾಡೆಪಟ್ಟುದು-ಮಾಡಲ್ಪಟ್ಟುದು. ಪೇಳೆಪಟ್ಟಂ ಪೇಳಲ್ಪಟ್ಟಂ.

೩೫೮ ಸಂಸ್ಕೃತಭಾವನಾಮಂಗಳ್ಗೆ ಸ್ವಾರ್ಥದಲ್ಲಿ "ಇಸು" ಪ್ರತ್ಯಯಾವಪ್ಪುದು. ಆದರೆ ಲ್ಯುಟ್ ಪ್ರತ್ಯಯ ಸಂಬಂಧವಾದ "ನ-ಣ" ವರ್ಣಂಗಳ್ಗೆ ಲೋಪವಪ್ಪುದು.

ಪ್ರಯೋಗಂ ॥ ಸ್ತುತಿ+ಇಸು=ಸ್ತುತಿಸು-ಟೀಕಿಸು-ಸ್ತಂಭಿಸು. ಸುತ್ತಿಸಲ್ಪಡು. ಸ್ಮರಣ+ಇಸು=ಸ್ಮರಿಸು-ನಮಿಸು, ಸ್ಮರಿಸಲ್ಪಡು.

೩೫೯ ಕನ್ನಡದ ನಾಮವಾಚಕಂಗಳ್ಗಂ ಅನುಕರಣಶಬ್ದಂಗಳ್ಗಂ ಸ್ವಾರ್ಥದಲ್ಲಿ "ಇಸು" ಪ್ರತ್ಯಯಾವಪ್ಪುದು.

ಪ್ರಯೋಗಂ ॥ ಕನ್ನಡಿಸು-ಅಬ್ಬರಿಸು-ಕಳವಳಿಸಲ್ಪಡು.

೩೬೦ ತಾರಮೊದಲಾದ ಶಬ್ದಂಗಳ್ಗೆ ಸ್ವಾರ್ಥದಲ್ಲಿ "ಐಸು" ಪ್ರತ್ಯಯವಪ್ಪುದು.

ಪ್ರಯೊಗಂ॥ ತಾರ್ಯೈಸು-ತೀರ್ಕೈಸು-ಪೂರ್ಯೈಸು-ಒಟ್ಟೈಸು-ಮಂದೈಸು-ಲಲ್ಲೈಸು-ತಳ್ಕೈಸು-ಚಾಳೈಸು-ಬೋಳೈಸು.

---

(೧) ವ್ಯಂಜನಾಂತ ಧಾತುಗಳ್ ಷಟ್ಪದಿಯಲ್ಲಿ ವಿಕಲ್ಪದಿಂ ಸ್ವರಾಂತವಾಗಿ ಪ್ರಯೋಗಿಸಲ್ಪಡುವವು. ಪ್ರ॥ ಕಾಣ್=ಕಾಣು, ಪೇಳ್=ಪೇಳು,

೩೬೧ ಧಾತುಗಳ್ಗೆ ಪ್ರೇರಕಾರ್ಥದಲ್ಲಿ "ಇಸು" ಪ್ರತ್ಯಯವಪ್ಪುದು.

ಪ್ರಯೋಗಂ ॥ ಕಾಯಿಸಿದಂ—ನುಡಿಸಿದಳ್— ಕಾಯಿಸಿದುದು—ಮಾಯಿಸಲ್ಪಟ್ಟಳ್—ಮೇಯಿಸಲ್ಪಟ್ಟುದು.

೩೬೨ ರೇಫ-ಲಕಾರ-ಳಕಾರಾಂತಂಗಳಾದ ಧಾತುಗಳ್ಗೆ ಪ್ರೇರಕಾರ್ಥದಲ್ಲಿ ಬಹುಳವಾಗಿ "ಚು" ಪ್ರತ್ಯಯವಪ್ಪುದು.

ಪ್ರಯೋಗಂ॥ ಪೊಣರ್ಚಿದಂ—ಪೊಣರಿಸಿದಂ—ಬಿದಿರ್ಚಿದಂ—ಬಿದಿರಿಸಿದಂ—ಅರಲ್ಚಿದಂ- ಅರಲಿಸಿದಂ—ಕಳಲ್ಚಿದಂ—ಕಳಲಿಸಿದಂ—ಪೊರಳ್ಚಿದಂ—ಪೊರಳಿಸಿದಂ—ಕೆರಳ್ಚಿದಂ—ಕೆರಳಿಸಿದಂ.

೩೬೩ ಮಾಧಾತುಗೆ ಪರದಲ್ಲಿ ಇಸುಪ್ರತ್ಯಯವಿರ್ದೊಡೆ ವಿಕಲ್ಪವಾಗಿ ಧಾತುವಿನ ದೀರ್ಘಕ್ಕೆ "ಇಸ್" ಎಂಬಾದೇಶವಪ್ಪುದು.

ಪ್ರಯೋಗಂ ॥ ಮಿಸಿಸಿದಳ್-ಮಾಯಿಸಿದಳ್.

೩೬೪ ಇಸುಪ್ರತ್ಯಯಾಂತವಾದ ಧಾತುಗೆ ಪರದಲ್ಲಿ ಇಸುಪ್ರತ್ಯಯವಿರ್ದೊಡೆ ಪೂರ್ವಪ್ರತ್ಯಯಕ್ಕೆ ವಿಕಲ್ಪವಾಗಿ (೧) ಲೋಪವಪ್ಪುದು.

ಪ್ರಯೋಗಂ॥ ನುಡಿಸಿಸಿದಳ್—ನುಡಿಸಿದಳ್, ಕಾಣಿಸಿಸಿದಂ-ಕಾಣಿಸಿದಂ.

೩೬೫ ಭೂತವರ್ತಮಾನ ಭವಿಷ್ಯತ್ಕಾಲಂಗಳಲ್ಲಿ ಧಾತುಗಂ ಪ್ರತ್ಯಯಕ್ಕಂ ನಡುವೆ ಕ್ರಮವಾಗಿ "ದ-ದಪ-ವ" ಪ್ರತ್ಯಯಂಗಳಪ್ಪುವು.

ಪ್ರಯೋಗಂ ॥ ಮಾಡಿದಂ— ಮಾಡಿದಪಂ- ಮಾಡುವಂ- ಮಾಡಲ್ಪಟ್ಟುದು-ಮಾಡಲ್ಪಟ್ಟಪುದು-ಮಾಡಲ್ಪಡುವುದು.

---

(೧) ಸ್ವಾರ್ಥದಲ್ಲಿ ಇಸುಪ್ರತ್ಯಯಾಂತವಾದ ಧಾತುಗೆ ಇಸುಪ್ರತ್ಯಯಂ ಪರವಾದೊಡೆ ಪೂರ್ವಪ್ರತ್ಯಯಕ್ಕೆ ಲೋಪವಿಲ್ಲ.

೩೬೬ ಇರ್ಪುದೆಂಬರ್ಥವುಳ್ಳ ಉಳ್‌ಧಾತುಗಂ ಜ್ಞಾನಾರ್ಥಕವಾದ ಬಲ್‌ಧಾತುಗಂ "ದ-ದಪ-ವ" ಪ್ರತ್ಯಯಂಗಳ್ ಬಾರವು.

ಪ್ರಯೋಗಂ ॥ ಒಳಂ-ಒಳರ್, ಒಳೈ-ಒಳಿರ್, ಒಳೆಂ-ಒಳೆವು. ಬಲ್ಲಳ್-ಬಲ್ಲರ್, ಬಲ್ಲೈ-ಬಲ್ಲಿರ್, ಬಲ್ಲೆಂ-ಬಲ್ಲೆವು.

೩೬೭ ಸ್ತ್ರೀಲಿಂಗದಲ್ಲಿ ಪ್ರಥಮಪುರುಷೈಕವಚನ ಪ್ರತ್ಯಯಕ್ಕೆ 'ಅಳ್' ಎಂಬಾದೇಶವಪ್ಪುದು.

ಪ್ರಯೋಗಂ ॥ ಕಾದಳ್-ನುಡಿದಳ್, ಕಾಡುವಳ್.

೩೬೮ ನಪುಂಸಕಲಿಂಗದಲ್ಲಿ ಅಮ್ ಪ್ರತ್ಯಯ ಕ್ಕೆ 'ಉದು' ಅರ್ ಪ್ರತ್ಯಯಕ್ಕೆ 'ಉವು' ಎಂಬಾದೇಶಂಗಳಪ್ಪುವು.

ಪ್ರಯೋಗಂ ॥ ಉಲಿದುದು-ನಡೆದುದು, ಉಲಿದುವು-ಕೇಳ್ದುವು.

೩೬೯ ಭೂತಕಾಲದಲ್ಲಿ ಅಪ್ ಪ್ರತ್ಯಯಕ್ಕೆ 'ಅತ್ತು-ಇತ್ತು-ಇತು' ಎಂಬಾದೇಶಂಗಳ್ ವಿಕಲ್ಪವಾಗಿ ಅಪ್ಪುವು. ಆದರೆ ಇತು-ಇತ್ತು ಪ್ರತ್ಯಯಂಗಳ್ ಬಂದೊಡೆ ದಪ ಪ್ರತ್ಯಯಂ ಬಾರದು.

ಪ್ರಯೋಗಂ ॥ ಮೊಡಿದತ್ತು-ಮೊಡಿತ್ತು, (೧) ಮೊಡಲ್ಪಟ್ಟಿತು.

೩೭೦ ಇರ್ಪುದು ಎಂಬರ್ಥವುಳ್ಳ ಉಳ್ ಧಾತುವಿನ ಪ್ರಥಮಪುರುಷೈಕವಚನ ಬಹುವಚನ ಪ್ರತ್ಯಯಂಗಳ್ಗೆ ಕ್ರಮವಾಗಿ 'ಟು-ಅವು' ಎಂಬಾದೇಶಂಗಳುಂ-ಇರ್‌ಧಾತುಗೆ ವರ್ತಮಾನಕಾಲದಲ್ಲಿ ಪ್ರಥಮಪುರುಷೈಕವಚನ ಬಹುವಚನಂಗಳಲ್ಲಿ 'ಇದೆ-ಇವೆ' ರೂಪಂಗಳುಂ ವಿಕಲ್ಪವಾಗಿ ಬಪ್ಪುವು.

ಪ್ರಯೋಗಂ ॥ ಉಣ್ಟು-ಒಳವು-ಇದೆ. ಇರ್ದಪುದು.

೩೭೧ ಕಾಲತ್ರಯದಲ್ಲಿಯುಂ ಲಿಂಗತ್ರಯದಲ್ಲಿಯುಂ ಅಪ್-

---

(೧) ಕರ್ಮಾರ್ಥದಲ್ಲಿ ಅತ್ತು ಎಂಬ ಪ್ರತ್ಯಯಂ ಬಾರದು.

ಅರ್ ಪ್ರತ್ಯಯಂಗಳ್ಗೆ ಆದೇಶವಾಗಿ 'ಕುಂ-ಗುಂ' ಪ್ರತ್ಯಯಂಗಳಪ್ಪುವು. (೧)

ಪ್ರಯೋಗಂ ॥ ಮೊಳ್ಕುಂ-ಮೊಡುಗುಂ, ಪೇಳ್ಕುಂ- ಪೇಳ್ಗುಂ.

(ಷಟ್ಪದಿಯಲ್ಲಿ ಸಾಲ್ಗುಂ-ಬೆಳ್ಕುಂ— ಇವುಗಳ್ಗೆ ಸಾಕು-ಬೇಕು ಎಂದು ವಿಕಲ್ಪದಿಂದಪ್ಪುದು.)

॥ ವಿಧ್ಯಾದಿರೂಪಂಗಳ್ ॥

೩೭೨ ವಿಧ್ಯಾದ್ಯರ್ಥಂಗಳಲ್ಲಿ ಅಂ-ಅರ್ ಪ್ರತ್ಯಯಂಗಳ್ಗೆ ಆದೇಶವಾಗಿ 'ಕೆ-ಗೆ' ಎಂಬ ಪ್ರತ್ಯಯಂಗಳಪ್ಪುವು.

ಪ್ರಯೋಗಂ ॥ ಸಾರ್ಕೆ—ಬಾಳ್ಗೆ, ಈಗೆ—ಗೆಯ್ಗೆ.

೩೭೩ ವಿಧ್ಯಾದ್ಯರ್ಥಂಗಳಲ್ಲಿ ಅಂ-ಅರ್- (೨) ಅಯ್-ಇರ್ ಪ್ರತ್ಯಯಂಗಳ್ಗೆ ಅದೇಶವಾಗಿ 'ವುದು' ಪ್ರತ್ಯಯಮಪ್ಪುದು.

ಪ್ರಯೋಗಂ ॥ ಹರಿ, ಕಾವುದು. ಗುರುಗಳ್ ಪೇಳ್ವುದು. ನೀಮ್ ಮೊಳ್ವುದು. ನೀಂಗಳ್ ಮಾಳ್ಪುದು.

೩೭೪ ವಿಧ್ಯಾದ್ಯರ್ಥಂಗಳಲ್ಲಿ ಅಯ್ ಪ್ರತ್ಯಯಕ್ಕೆ ಆದೇಶವಾಗಿ ಅಕಾರನಪ್ಪುದು.

ಪ್ರಯೋಗಂ ॥ ಕಾಯ, ಏಱಯ, ಮೊಡ, ಬಾರ, ಕೇಳ.

೩೭೫ ವಿಧ್ಯಾದ್ಯರ್ಥಂಗಳಲ್ಲಿ ಅಯ್ ಪ್ರತ್ಯಯಕ್ಕೆ ವಿಕಲ್ಪನಾಗಿ ಲೋಪಮಪ್ಪುದು. ಮೇಸ್ ತರ್ ಬರ್ ಧಾತುಗಳ ಅಕಾರಕ್ಕೆ ದೀರ್ಘಾದೇಶವುಂ, ರೇಫಕ್ಕೆ ವಿಕಲ್ಪನಾಗಿ ಲೋಪವುಂ ಅಪ್ಪುವು.

---

(೧) ಗುಗುಂ ಎಂಬ ಪ್ರತ್ಯಯವು ಕೆಲಂಬರ ಮತದಲ್ಲಿ ಅಪ್ಪುದು.
ಪ್ರಯೋಗಂ ॥ ಕುಣಿಗುಗುಂ.

(೨) ಶ-ಶಾ. ಅಂ—ಅರ್—ಇರ್.

ಪ್ರಯೋಗಂ॥ ಕಾಯ್ಯೆ, ಕಾ, ಈಯ್ಯೆ, ಈ, ಮಾಡ್ಯೆ–ಮಾಡು ತಾರ್ಯೆ, ತಾರ, ತಾ, ಬಾರಯ್–ಬಾರ, ಬಾ.

೩೨೬ ಸ್ತ್ರೀಲಿಂಗದಲ್ಲಿ ವಿಕಲ್ಪವಾಗಿ (೧) ಅಯ್ ಪ್ರತ್ಯಯಕ್ಕೆ ಆದೇಶವಾಗಿ 'ಔ' ಪ್ರತ್ಯಯವಪ್ಪುದು.

ಪ್ರಯೋಗಂ ॥ ಕಾಯೌ–ಕಾಯ, ಪೇಳೌ–ಪೇಳ

೩೨೭ ವಿಧ್ಯಾದ್ಯರ್ಥಂಗಳಲ್ಲಿ ಷಟ್ಪದಿಯಲ್ಲಿ ವ್ಯಂಜನಾಂತ ಧಾತುಗಳ್ಗೆ ಪರವಾದ ಅಯ್ ಪ್ರತ್ಯಯಕ್ಕೆ ಬಹುಳವಾಗಿ 'ಉ' ಕಾರಾದೇಶವಪ್ಪುದು. (೨)

ಪ್ರಯೋಗಂ ॥ ಕಾಣು–ಕಾಣ್, ಕಾಣ. ಇರು–ಇರ್, ಇರ.

೩೨೮ ವಿಧ್ಯಾದ್ಯರ್ಥಂಗಳಲ್ಲಿ ವಿಕಲ್ಪವಾಗಿ ಇರ್ ಪ್ರತ್ಯಯಕ್ಕೆ ಆದೇಶವಾಗಿ 'ಇಮ್' ಪ್ರತ್ಯಯವಪ್ಪುದು.

ಪ್ರಯೋಗಂ ॥ ಬೆಸಸಿಂ–ಕೇಳಿಂ, ಬೆಸಸಿರ್–ಕೇಳಿರ್. (೩)

೩೨೯ ವಿಧ್ಯಾದ್ಯರ್ಥಂಗಳಲ್ಲಿ ಎನ್ ಪ್ರತ್ಯಯಕ್ಕೆ "ವೆನ" ಎಂಬಾದೇಶವಪ್ಪುದು.

ಪ್ರಯೋಗಂ॥ ಮಾಡುವೆನ್ = ಮಾಳ್ಪೆಂ, ಕೇಳ್ವೆಂ, ಕಾಣ್ಗೆಂ.

---

(೧) ಬಹುವಚನದಲ್ಲಿ ವಿಕಲ್ಪವಾಗಿ ಇರ್ ಪ್ರತ್ಯಯಕ್ಕೆ ಪರವಾಗಿ ಔ ಎಂಬ ವರ್ಣಾಗಮವಪ್ಪುದು. ಪ್ರ ॥ ನೋಡಿರ್. ನೋಡಿರೌ ಶ, ಶಾ. ಪ್ರತಿಷೇಧಧಾತು ವಿಷಯದಲ್ಲಿ ಅಯ್ ಪ್ರತ್ಯಯಕ್ಕೆ ವಿಕಲ್ಪವಾಗಿ ಓಕಾರಾದೇಶವಪ್ಪುದು. ಪ್ರ॥ ನಂಬಿದೋ. ( ಓ, ಔ, ಎಂಬ ಪ್ರಶ್ನಾರ್ಥಕಾವ್ಯಯಂಗಳು ಮುಂತು)

(೨) ತರ್, ಬರ್, ಯಕಾರಾಂತ ಧಾತುಗಳ್ಗೆ ಪರವಾದ ಅಯ್, ಪ್ರತ್ಯಯಕ್ಕೆ ಉಕಾರಾದೇಶವಿಲ್ಲ.

(೩) ತರ್, ಬರ್, ಧಾತುಗಳ್ಗೆ ಇಮ್ ಪ್ರತ್ಯಯಂ ಪರವಾದರೆ ಧಾತ್ವಂತವಾದ ರೇಫಕ್ಕೆ ನಕಾರಾದೇಶವಪ್ಪುದು. ಪ್ರ॥ ತನ್ನಿಂ-ಬನ್ನಿಂ.

೩೮೦ ವಿಧ್ಯಾದ್ಯರ್ಥಂಗಳಲ್ಲಿ ಎವು ಪ್ರತ್ಯಯಕ್ಕೆ "ವಂ" ಎಂಬಾದೇಶವಪ್ಪುದು.

ಪ್ರಯೋಗಂ॥ ನುಡಿವಂ- ನೋಡುವಂ-ನೋಳ್ಪಂ-ತಡೆವಂ.

೩೮೧ ಎವು ಪ್ರತ್ಯಯಕ್ಕೆ ವಿಕಲ್ಪವಾಗಿ "ಎನ್" ಎಂಬಾದೇಶವಪ್ಪುದು

ಪ್ರಯೋಗಂ॥ ನೋಡಿದೆವು—ನೋಡಿದೆಂ, ನೋಡಿದಪೆವು—ನೋಡಿದಪೆಂ, ನೋಡುವೆವು—ನೋಡುವೆಂ

೩೮೨ ಷಟ್ಪದಿಯಲ್ಲಿ ಅಯ್-ಎನ್ ಎಂಬ ಪ್ರತ್ಯಯಂಗಳ್ಗೆ ವಿಕಲ್ಪವಾಗಿ "ಎ" ಎಂಬಾದೇಶವಪ್ಪುದು

ಪ್ರಯೋಗಂ॥ ನೋಡಿದೆ—ನೋಡಿದಪೆ—ನೋಡುವೆ

॥ ಪ್ರತಿಷೇಧ (ನಿಷೇಧ) ರೂಪಂಗಳ್ ॥

೩೮೩ ಪ್ರತಿಷೇಧ ವಿಷಯದಲ್ಲಿ ದ-ದಪ-ವ ಪ್ರತ್ಯಯಂಗಳ್ ಬಾರವು.

ಪ್ರಯೋಗಂ॥ ಕಾಣಂ-ನೆಯ್ಯಳ್-ಪೇಳದು.

೩೮೪ ಪ್ರತಿಷೇಧ ವಿಷಯದಲ್ಲಿ ನಪುಂಸಕ ಲಿಂಗದಲ್ಲಿ ಅಂ-ಅರ್ ಪ್ರತ್ಯಯಂಗಳ್ಗೆ ಅದು-ಅವು ಎಂಬಾದೇಶಂಗಳಪ್ಪುವು.

ಪ್ರಯೋಗಂ॥ ನೋಡದು—ನೋಡವು. ಕಾಣದು—ಕಾಣವು.

೩೮೫ ಷಟ್ಪದಿಯಲ್ಲಿ ಪ್ರತಿಷೇಧ ವಿಷಯದಲ್ಲಿ ಅಯ್ ಪ್ರತ್ಯಯಕ್ಕೆ "ಎ" ಎಂಬಾದೇಶವಪ್ಪುದು.

ಪ್ರಯೋಗಂ॥ ನೀಂನೋಡೆ—ನುಡಿಯೆ—ಪೇಳೆ, ಸಾರೆ.

೩೮೬ ವಿಧ್ಯಾದ್ಯರ್ಥಂಗಳಲ್ಲಿ ಪ್ರತಿಷೇಧ ವಿಷಯದಲ್ಲಿ ಧಾತುಗಳ್ಗೆ ಪರವಾಗಿ "ಬೇಡಂ-ಬೇಡ" ಎಂಬಾದೇಶಂಗಳಪ್ಪುವು.

ಪ್ರಯೋಗಂ ॥ ನೋಡಬೇಡಂ—ನೋಡಬೇಡ. ಪೇಳಲ್ಬೇಡಂ—ಪೇಳಬೇಡ.

೩೮೭ ಧಾತುಗಂ, ಪರವಾದ ಬೇಡಂ-ಬೇಡ ಈ ಶಬ್ದಂಗಳ್ಗಂ ನಡುವೆ "ಅ-ಅಲ್" ಎಂಬಾಗಮಂಗಳಪ್ಪುವು.

ಪ್ರಯೋಗಂ॥ ಮೊಡಲ್‌ಬೇಡಂ-ಮೊಡಬೇಡಂ. ಕೇಳಲ್‌ಬೇಡಂ-ಕೇಳವೇಡಂ.

೩೮೮ ಅಲ್ ಪ್ರತ್ಯಯಕ್ಕೆ ಪರವಾಗಿ ವಿಕಲ್ಪವಾಗಿ "ಇನ್" ಎಂಬಾಗಮ ವಪ್ಪುದು

ಪ್ರಯೋಗಂ॥ ಮೊಡಲಿಂಬೇಡಂ-ಸೋಳಲಿಂಬೇಡಂ. ಸೋಳಲ್‌ಬೇಡ.

೩೮೯ ಧಾತುಗಳ್ಗೆ ಪ್ರತಿಷೇಧ ವಿಷಯದಲ್ಲಿ "ಅಲ್" ಪ್ರತ್ಯಯವಪ್ಪುದು

ಪ್ರಯೋಗಂ॥ ಮೊಡಲ್-(ಮೊಡಬಾರದು) ಬೇಡಲ್.

೩೯೦ ತರ್-ಬರ್ ಧಾತುಗಳ ಅಕಾರಕ್ಕೆ ಪ್ರತಿಷೇಧವಿಷಯದಲ್ಲಿ ದೀರ್ಘಾದೇಶವಪ್ಪುದು

ಪ್ರಯೋಗಂ॥ ತಾರಂ-ಬಾರಂ. ತಾರಳ್-ಬಾರಳ್.

೩೯೧ ಪ್ರತಿಷೇಧವಿಷಯದಲ್ಲಿ ಆಗು ಧಾತುವಿಂಗೆ ಪರವಾದ ಅಮ್ ಪ್ರತ್ಯಯಕ್ಕೆ ಆದೇಶವಾಗಿ ಅದು-ಅ ಎಂಬ ಪ್ರತ್ಯಯಂಗಳ್ ವಿಕಲ್ಪವಾಗಿ ಬರ್ಪುವು

ಪ್ರಯೋಗಂ॥ ಆಗದು-ಆಗ (ಶ-ಶಾ. ಆಗಾ ಎಂದುಂಟು.)

॥ ಸ್ವರಾಂತ ಧಾತುಗಳ್ಗೆ ಬರ್ಪ ಕಾರ್ಯಂಗಳ್ ॥

೩೯೨ ದಕಾರಾದಿ ಪ್ರತ್ಯಯಂ ಪರವಾದೊಡೆ ಬಹುಸ್ವರ ವೃಕ್ಷ ಮೋಣ್ ಗುರ್ವಾದಿಯಾದ ಧಾತು ವಿನಂತ್ಯವಾದ ಉಕಾರಕ್ಕೆ ಇಕಾರಾ ದೇಶವಪ್ಪುದು

ಪ್ರಯೋಗಂ॥ ಹರಡಿದಂ-ಮುಗುಳ್ಚಿದಂ-ತರ್ಬಿದಂ, ನೋಡಿದಂ.

೩೯೩ ದಕಾರಾದಿ ಪ್ರತ್ಯಯಂ ಪರವಾದೊಡೆ ಆಗು-ಪೋಗು ಧಾತುಗಳ ಗು ಶಬ್ದಕ್ಕೆ ಲೋಪವಪ್ಪುದು

ಪ್ರಯೋಗಂ॥ ಆದಂ—ಆದಪಂ—ಆದೊಡೆ. ಪೋದಂ—ಪೋದಪಂ—ಪೋದೊಡೆ.

೩೯೪ ಆಗು, ಪೋಗುಧಾತುಗಳ್ಗೆ ಪರನಾದ (೧) ಇತುಪ್ರತ್ಯಯದ ಇಕಾರಕ್ಕೆ ಯಕಾರಾದೇಶವುಂಧಾತ್ವಂತವಾದಗುಶಬ್ದಕ್ಕೆ ಲೋಪವುಂ ಅಪ್ಪುವು.

ಪ್ರಯೋಗಂ ॥ ಆಗು + ಇತು = ಆ + ಯ್‌ತು = ಆಯ್ತು. ಪೋಯ್ತು.

೩೯೫ ದಕಾರಾದಿಪ್ರತ್ಯಯಂ ಪರವಾದೊಡೆ ಲಘ್ವಾದಿಯಾದ ದ್ವಿಸ್ವರವುಳ್ಳ ಧಾತುಗಳ ಕಡೆಯ ಗು ಶಬ್ದಕ್ಕೆ ಕಕಾರಾದೇಶವಪ್ಪುದು.

ಪ್ರಯೋಗಂ ॥ ಒಕ್ಕಂ-ಪೊಕ್ಕಂ-ಒಕ್ಕಪಂ-ಪೊಕ್ಕಪಂ-ಒಕ್ಕೊಡೆ-ಪೊಕ್ಕೊಡೆ-ಒಕ್ಕು-ಪೊಕ್ಕು.

೩೯೬ ದಕಾರಾದಿಪ್ರತ್ಯಯಂ ಪರವಾದೊಡೆ ಲಘ್ವಾದಿಯಾದ ದ್ವಿಸ್ವರವುಳ್ಳ ಧಾತುಗಳ ಕಡೆಯ ಡು ಶಬ್ದಕ್ಕೆ ಟಕಾರಾದೇಶವಪ್ಪುದು.

ಪ್ರಯೋಗಂ ॥ ಅಟ್ಟಳ್-ಅಟ್ಟಪಳ್-ಉಟ್ಟಳ್-ಉಟ್ಟಪಳ್

೩೯೭ ಪೊರಡುಧಾತುಗೆ ದಕಾರಾದಿಪ್ರತ್ಯಯಂ ಪರವಾದೊಡೆ ಡುಶಬ್ದಕ್ಕೆ ಟಕಾರಾದೇಶಮುಂ ದಕಾರಕ್ಕೆ ಲೋಪವುಂ ಅಪ್ಪುವು.

ಪ್ರಯೋಗಂ ॥ ಪೊರಟಂ—ಪೊರಟಪಂ—ಪೊರಟು.

೩೯೮ ದಕಾರಾದಿಪ್ರತ್ಯಯಂ ಪರವಾದೊಡೆ ಉಗು—ಪುಗು—ಕೊಡು-ತುಡುಧಾತುಗಳ ಆದಿಸ್ವರಕ್ಕೆ 'ಒ' ಎಂಬಾದೇಶವಪ್ಪುದು.

---

(೧) ಶ. ಶಾ. ಆಗು, ಪೋಗು, ಧಾತುಗಳ್ಗೆ ಇತ್ತುಪ್ರತ್ಯಯಂಪರನಾದೊಡೆ ಗು, ಶಬ್ದಕ್ಕೆ ಲೋಪವಪ್ಪುದು. ಪ್ರ॥ ಆಯಿತ್ತು. ಪೋಯಿತ್ತು.

ಪ್ರಯೋಗಂ ॥ ಒಕ್ಕಂ-ಪೊಕ್ಕಂ-ಕೊಟ್ಟಂ-ತೊಟ್ಟಂ.

೩೯೯ ದಕಾರಾದಿಪ್ರತ್ಯಯಂ ಪರವಾದೊಡೆ ಹ್ರಸ್ವಾದಿಯಾದ ದ್ವಿಸ್ವರವುಳ್ಳ ಧಾತುಗಳ ಕಡೆಯ ಱು ಶಬ್ದಕ್ಕೆ ತಕಾರಾದೇಶವಪ್ಪುದು.

ಪ್ರಯೋಗಂ ॥ ತೆತ್ತಂ-ತೆತ್ತಪಂ-ಪೆತ್ತಂ-ಪೆತ್ತಪಂ.

೪೦೦ ದಕಾರಾದಿ ಪ್ರತ್ಯಯಂ ಪರವಾದೊಡೆ ಎಳ್ಚಱು, (೧) ಬೇಸಱು-ಆಸಱು ಈ ಧಾತುಗಳ ಕಡೆಯ ಱು ಶಬ್ದಕ್ಕೆ ತಕಾರಾದೇಶವಪ್ಪುದು.

ಪ್ರಯೋಗಂ ॥ ಎಳ್ಚತ್ತಂ-ಬೇಸತ್ತು-ಆಸತ್ತಪಂ.

೪೦೧ ದಕಾರಾದಿಪ್ರತ್ಯಯಂ ಪರವಾದೊಡೆ ಲಘ್ವಾದಿಯಾದ ದ್ವಿಸ್ವರವುಳ್ಳ ಧಾತುಗಳಕಡೆಯ 'ಸು' ಶಬ್ದಕ್ಕೆ ಚಕಾರಾದೇಶವಪ್ಪುದು.

ಪ್ರಯೋಗಂ॥ ಇಸು+ದಂ= ಎಚ್ಚಂ-ಬೆಚ್ಚಪಂ. ಬೆಚ್ಚು.

೪೦೨ ದಕಾರಾದಿಪ್ರತ್ಯಯಂ ಪರವಾದೊಡೆ ಇಸು-ಬಿಸು-ಕಿಸು-ಕಿರು-ಗಿರುಧಾತುಗಳ ಆದಿಸ್ವರಕ್ಕೆ ಎ ಎಂಬಾದೇಶವಪ್ಪುದು

ಪ್ರಯೋಗಂ ॥ ಎಚ್ಚು-ಬೆಚ್ಚಂ-ಕೆಟ್ಟು-ಕೆತ್ತಂ-ಗೆತ್ತು.

೪೦೩ ದಕಾರಾದಿಪ್ರತ್ಯಯಂ ಪರವಾದೊಡೆ ತವುಧಾತುವಿನ ಅಂತ್ಯಸ್ವರದಿಂಕೂಡಿದ ವ್ಯಂಜನಕ್ಕೆ ಕೆಲಬರ ಮತದಲ್ಲಿ ಪಕಾರಾದೇಶವಪ್ಪುದು.

ಪ್ರಯೋಗಂ ॥ ತಪ್ಪಂ-ತಪ್ಪಪಂ-ತಪ್ಪಳ್.

೪೦೪ ಆದೇಶವಾಗಿ ಕ, ಚ, ಟ, ತ, ಪ, ಕಾರಾಂತಂಗಳಾದ

---

(೧) ಶ-ಶಾ. (ಕುಟ್ಟುವುದೆಂಬರ್ಥವುಳ್ಳ) ಮಿದಿ. ಮುದು ಧಾತುಗಳ ಅಂತ್ಯಸ್ವರದಿಂ ಕೂಡಿದ ವ್ಯಂಜನಕ್ಕೆ ತಕಾರಾದೇಶವಪ್ಪುದು. ಪ್ರ ॥ ಮಿತ್ತಂ-ಮುತ್ತಂ.

ಧಾತುಗಳ್ಗೆ ಪರವಾದ ಪ್ರತ್ಯಯ ಸಂಬಂಧಿಯಾದ ದಕಾರಕ್ಕೆ ಪೂರ್ವವರ್ಣಾದೇಶವಪ್ಪುದು.

ಪ್ರಯೋಗಂ॥ ಒಕ್ಕಂ-ಎಚ್ಚಂ-ತೊಟ್ಟಂ-ಪೆತ್ತಂ-ತಪ್ಪಂ.

೪೦೫ ದಕಾರಾದಿ ಪ್ರತ್ಯಯಂ ಪರವಾದೊಡೆ (ಪ್ರದಾನಾರ್ಥಕವಾದ) ಈ ಧಾತುಗಂ. ಸಾ ಧಾತುಗಂ ದೀರ್ಘಕ್ಕೆ ಹ್ರಸ್ವಾದೇಶಮುಂ ಪರವಾದ ದಕಾರಕ್ಕೆ ದ್ವಿತ್ವತಕಾರಾದೇಶವುಂ ಅಪ್ಪುವು.

ಪ್ರಯೋಗಂ॥ ಇತ್ತಂ-ಇತ್ತಪಳ್-ಇತ್ತಪುದು. ಸತ್ತಪಂ-ಸತ್ತಪುದು-ಸತ್ತುದು.

೪೦೬ ಜಿನುಗುವುದೆಂಬರ್ಥವುಳ್ಳ (೧) ಒಱ್ಧಾತುಗಂ-ಕಾಳ್-ಕೀ-ಕುರಿ-ಚಳಿ-ನೊಳೆ-ಕಲೆ-ಪೂ-ಬೀ-ಧಾತುಗಳ್ಗಂ ಪರವಾದ ಪ್ರತ್ಯಯಸಂಬಂಧಿಯಾದ ದಕಾರಕ್ಕೆ ತಕಾರಾದೇಶವಪ್ಪುದು.

ಪ್ರಯೋಗಂ॥ ಒಱ್ತುದು-ಒಱ್ತು-ಒಱ್ತೊಡೆ-ಕಾಳ್ತಂ. ಕೀತುದು-ಕುರಿತಳ್-ಚಳಿತುದು-ನೊಳೆತುದು-ಕಲೆತುದು-ಪೂತುದು-ಬೀತುದು.

೪೦೭ ದಕಾರಾದಿ ಪ್ರತ್ಯಯಂ ಪರವಾದೊಡೆ ನೋ-ಬೇ-ಮೀಧಾತುಗಳ ದೀರ್ಘಕ್ಕೆ ಹ್ರಸ್ವಾದೇಶವುಂ ಧಾತುಗಂ ಪ್ರತ್ಯಯಕ್ಕಂ ನಡುವೆ ನಕಾರಾಗಮವುಂ ಅಪ್ಪುದು.

ಪ್ರಯೋಗಂ॥ ನೊಂದಂ-ನೊಂದಪಂ-ನೊಂದೊಡೆ-ನೊಂದು ಬೆಂದಂ-ಮಿಂದಂ.

೪೦೮ ಪನಿ-ಸಳಿ ಮೊದಲಾದ ಧಾತುಗಳ್ಗೆ ಪರವಾದ ಪ್ರತ್ಯಯ ಸಂಬಂಧಿಯಾದ ದಕಾರಕ್ಕೆ ವಿಕಲ್ಪವಾಗಿ ತಕಾರಾದೇಶವಪ್ಪುದು.

---

(೧) ಶ-ಶಬ. ಶೋಷಣಾರ್ಥಕವಾದ ಅಱ್ ಧಾತುಗೆ ಪರವಾದ ದಕಾರಕ್ಕೆ ತಕಾರಾದೇಶವಪ್ಪುದು. ಪ್ರಯೋಗಂ॥ ಅಱಿತುದು-ಅಱಿತಪಂ.

ಪ್ರಯೋಗಂ ॥ ಪನಿತುದು-ಪನಿತಪ್ಪುದು, ಪನಿದುದು. ಬನಿದಪ್ಪುದು. ಅರಿತುದು—ಅರಿದಂ. ಕಳಿತುದು-ಕಳಿದುದು.

೪೦೯ ಕಕಾರಾದಿ ಪ್ರತ್ಯಯಂ ಪರವಾದೊಡೆ ಧಾತ್ವಂತಂಗಳಾದ ಱು-ಡುವರ್ಣಂಗಳ್ಗೆ ರೇಫ ಱಕಾರಾದೇಶಂಗಳಪ್ಪುವು.

ಪ್ರಯೋಗಂ ॥ ತೋರ್ಕೆ-ತೋರ್ಕುಂ, ಮಾಱ್ಕೆ, ಮಾಱ್ಕುಂ.

೪೧೦ ಗಕಾರಾದಿ ಪ್ರತ್ಯಯಂ ಪರವಾದೊಡೆ ಧಾತ್ವಂತಂಗಳಾದ ಱು-ಡು ವರ್ಣಂಗಳ್ಗೆ ವಿಕಲ್ಪವಾಗಿ ರೇಫ-ಱಕಾರಾದೇಶಂಗಳಪ್ಪುವು

ಪ್ರಯೋಗಂ ॥ ತೋರ್ಗೆ-ತೋಱುಗೆ, ಮಾಱ್ಗುಂ- ಮಾಡುಗುಂ, ಬಿರ್ಗೆ—ಬಿದಱುಗೆ.

೪೧೧ ದಕಾರಾದಿ ಪ್ರತ್ಯಯಂ ಪರವಾದೊಡೆ ಧಾತ್ವಂತಮಾದ ಱು ಶಬ್ದಕ್ಕೆ ವಿಕಲ್ಪವಾಗಿ ರೇಫಾದೇಶವಪ್ಪುದು.

ಪ್ರಯೋಗಂ॥ ತೋರ್ದಂ-ತೋಱಿದಂ, ತೋರ್ದಪಂ-ತೋಱಿದಪಂ.

೪೧೨ ವಕಾರಾದಿ ಪ್ರತ್ಯಯಂ ಪರವಾದೊಡೆ ಧಾತ್ವಂತವಾದ ಱು-ಡುವರ್ಣಂಗಳ್ಗೆ ರೇಫ-ಱಕಾರಾದೇಶಂಗಳ್ ಬಾರವು.

ಪ್ರಯೋಗಂ॥ ತೋಱುವಂ—ತೋಱುವಳ್, ಬಱುವಂ-ಬಱುವಳ್, ಕುಡುವಂ-ಕುಡುವಳ್, ಬೀಡುವಂ-ಬೀಡುವಳ್.

೪೧೩ ಇಸು ಪ್ರತ್ಯಯಾಂತಧಾತುಗೆ ಕಕಾರಾದಿ ಪ್ರತ್ಯಯಂ ಪರವಾದೊಡೆ ಇಸು ಪ್ರತ್ಯಯದ ಸುಶಬ್ದಕ್ಕೆ (೧) ಲೋಪವಪ್ಪುದು.

ಪ್ರಯೋಗಂ ॥ ಬಿಡಿಕುಂ, ಬರಿಕುಂ, ನಿಲಿಕೆ, ಕಾಣಿಕೆ.

---

(೧) ಶ. ಶಾ. ಬಹು ಸ್ವರವುಳ್ಳ ಧಾತ್ವಂತವಾದ ಸುಶಬ್ದಕ್ಕೆ ವಿಕಲ್ಪವಾಗಿ ಲೋಪವಪ್ಪುದು. ಪ್ರ॥ ಅಳಸುವಂ-ಅಲಸಂ.

೪೧೪ (೧) ಆಗು-ಪೋಗು ಧಾತುಗಳ್ಗೆ ವಕಾರಾದಿ ಪ್ರತ್ಯೆಯಂ ಪರವಾದೊಡೆ ಧಾತ್ವಂತವಾದ ಗು ಶಬ್ದಕ್ಕೆ ವಿಕಲ್ಪವಾಗಿ ಲೋಪವಪ್ಪುದು.

ಪ್ರಯೋಗಂ ॥ ಆಪಂ-ಆಗುವಂ, ಪೋಪಂ-ಪೋಗುವಂ.

೪೧೫ ಕಕಾರಾದಿಪ್ರತ್ಯಯಂ ಪರವಾದೊಡೆ ಆಗು ಧಾತುವಿನ ದೀರ್ಘಕ್ಕೆ ಹ್ರಸ್ವಮುಂ ಗು ಶಬ್ದಕ್ಕೆ ಲೋಪಮುಂ ಪರವಾದ ಕಕಾರಕ್ಕೆ ದಿತ್ವಮುಂ ಅಪ್ಪುವು.

ಪ್ರಯೋಗಂ॥ ಅಕ್ಕುಂ-ಅಕ್ಕೆ.

೪೧೬ ಕಕಾರಾದಿಪ್ರತ್ಯಯಂ ಪರವಾದೊಡೆ ಪೋಗುಧಾತುವಿನ ಗು ಶಬ್ದಕ್ಕೆ ಲೋಪವಪ್ಪುದು.

ಪ್ರಯೋಗಂ ॥ ಪೋಕುಂ-ಪೋಕೆ.

೪೧೭ ಆಗುಧಾತುವಿನ ದೀರ್ಘಕ್ಕೆ ಹ್ರಸ್ವಮುಂ ಪರವಾದ ಪಕಾರಕ್ಕೆ ವಿಕಲ್ಪವಾಗಿ ದ್ವಿತ್ವಮುಂ-ದ್ವಿತ್ವಾಭಾವ (ದ್ವಿತ್ವವಿಲ್ಲದ) ಪಕ್ಷದಲ್ಲಿ ಪಕಾರಕ್ಕೆ ಹಕಾರಾದೇಶಮುಂ ಅಪ್ಪುವು.

ಪ್ರಯೋಗಂ ॥ ಆಗುವಂ-ಅಪ್ಪಂ-ಅಹಂ-ಅಹಳ್.

೪೧೮ ವಕಾರಾದಿಪ್ರತ್ಯಯಂ ಪರವಾದೊಡೆ ಅವು-(೨) ತವು ಧಾತ್ವಂತಂಗಳಾದ ಉಕಾರಕ್ಕೆ ಇಕಾರಾದೇಶಮುಂ ಪರವಾದ ವಕಾರಕ್ಕೆ ಪಕಾರಾದೇಶಮುಂ ಅಪ್ಪುವು.

ಪ್ರಯೋಗಂ ॥ ಅವಿಪಂ-ತವಿಪಂ.........

---

(೧) ಶ. ಶಾ. ತಾಗುಧಾತ್ವಂತವಾದ ಗುಶಬ್ದಕ್ಕೆ ವಿಕಲ್ಪದಿಂ ಲೋಪವಪ್ಪುದು. ಪ್ರಯೋಗಂ॥ ತಾಪಂ-ತಾಗುವಂ.

(೨) ಶ. ಶಾ. ಓ-ಪೂಧಾತುಗಳ್ಗೆ ಪರವಾದ ವಕಾರಕ್ಕೆ ಪಕಾರಾದೇಶವಪ್ಪುದು. ಪ್ರಯೋಗಂ॥ ಓಪಂ-ಪೂಪುದು.

೪೯೯ * ಲುಪ್ತಾಂತ್ಯವರ್ಣವಾದ ಧಾತುಗಳ್ಗೆ ಪರವಾದ ವಕಾರಕ್ಕೆ ಪಕಾರಾದೇಶವಪ್ಪುದು.

ಪ್ರಯೋಗಂ॥ ಆಪಂ-ಅಪ್ಪಂ-ಮಾಡಿಪಂ-ಕಾಣಿಪಂ-ಅಲಪಂ.

ವ್ಯಂಜನಾಂತ ಧಾತುಗಳ್ಗೆ ಬರ್ಪ ಕಾರ್ಯಂಗಳ್.

೫೦೦ ಣಕಾರಾಂತ ಧಾತುಗಳ್ಗೆ ಪರವಾದ ವಕಾರಕ್ಕೆ ಬಕಾರಾದೇಶವಪ್ಪುದು.

ಪ್ರಯೋಗಂ॥ ಕಾಣ್ಬಂ-ಮಾಣ್ಬಂ-ಉಣ್ಬಂ.

೫೦೧ ಎನ್-ತಿನ್-ನಾನ್ ಧಾತುಗಳ್ಗೆ ಪರವಾದ ವಕಾರಕ್ಕೆ ಬಕಾರಾದೇಶವಪ್ಪುದು.

ಪ್ರಯೋಗಂ ॥ ಎಂಬಂ-ತಿಂಬಂ-ನಾಂಬಂ.

೫೦೨ ನಕಾರಾಂತ ಧಾತುಗಳ್ಗೆ ಪರವಾದ ವಕಾರಕ್ಕೆ ಪಕಾರಾದೇಶವಪ್ಪುದು.

ಪ್ರಯೋಗಂ॥ ಆಂಪಂ-ಸೀಂಪಂ-ನೋಂಪಂ

೫೦೩ ಆದೇಶವಾಗಿ ಬಂದ ರೇಫ-ಳಕಾರಂಗಳ್ಗೆ ಪರವಾದ ವಕಾರಕ್ಕೆ ಪಕಾರಾದೇಶವಪ್ಪುದು.

ಪ್ರಯೋಗಂ ॥ ತೋರ್ಪಂ-ತೋರ್ಪಿನಂ-ಮಾಳ್ಪಂ.

೫೦೪ (೧) ಕಾರ್- ಕೂರ್- ಗೋರ್- ತರ್- ನೇರ್- ಬರ್ ಧಾತುಗಳ್ಗೆ ಪರವಾದ ವಕಾರಕ್ಕೆ ಪಕಾರಾದೇಶವಪ್ಪುದು.

ಪ್ರಯೋಗಂ ॥ ಕಾರ್ಪಂ-ಕೂರ್ಪಳ್-ಗೋರ್ಪಂ-ತರ್ಪಂ-ನೇರ್ಪಂ-ಬರ್ಪುದು.

---

* ವರ್ಣವೆಂದೊಡೆ ಇಲ್ಲಿ ಅಂತ್ಯಸ್ವರದಿಂ ಕೂಡಿದ ವ್ಯಂಜನವೆಂದರಿವುದು.

(೧) ಶ ಶಾ. ಪೊಡರ್-ತೊಡರ್-ಮಿಳಿರ್-ಬಿಳರ್-ಪಸರ್-ಉಸಿರ್-ಉದಿರ್-ಅದಿರ್-ಬಿದಿರ್-ಅಡರ್ ಈ ಧಾತುಗಳ್ಗೆ ಪರವಾದ ವಕಾರಕ್ಕೆ ವಿಕಲ್ಪವಾಗಿ ಪಕಾರಾದೇಶವಪ್ಪುದು. ಪ್ರಯೋಗಂ॥ ಪೊಡರ್ಪಂ-ಪೊಡರ್ವಂ ಇಂತುಳಿದುವ ನರಿವುದು.

೩೦೫ (ಸರಿಮಾಡೆಂಬರ್ಥವೃಕ್ಷ) ಪಣ್, ಧಾತುಗೆ ದಕಾರ ವಕಾರಾದಿ ಪ್ರತ್ಯಯಂಗಳ್ ಪರವಾದೊಡೆ ಪ್ರಕೃತಿಪ್ರತ್ಯಯಂಗಳ ನಡುವೆ ಉಕಾರಾಗಮವಪ್ಪುದು.

ಪ್ರಯೋಗಂ ॥ ಪಣ್ + ಉ + ದಂ = ಪಣ್ಣಿದಂ- ಪಣ್ಣಿದಪಂ, ಪಣ್ಣುವಳ್.

೩೦೬ ಉಣ್-ಕಾಣ್-ಕೊಳ್ ಧಾತುಗಳ್ಗೆ ಪರವಾದ ದಕಾರಕ್ಕೆ ಡಕಾರಾದೇಶವಪ್ಪುದು.

ಪ್ರಯೋಗಂ ॥ ಉಣ್ಡಪಂ-ಕಣ್ಡಂ-ಕೊಣ್ಡಂ

೩೦೭ ಚಿಗುರ್-ಬೆಮರ್-ಅಳ್-ಉಳ್ ಧಾತುಗಳ್ಗೆ ಪರವಾದ ದಕಾರಕ್ಕೆ ವಿಕಲ್ಪವಾಗಿ ತಕಾರಾದೇಶವಪ್ಪುದು.

ಪ್ರಯೋಗಂ॥ ಚಿಗುರ್ತುದು-ಚಿಗುರ್ದುದು, ಬೆಮರ್ತಂ-ಬೆಮರ್ದಂ, ಅಳ್ತಪಂ-ಅಳ್ದಪಂ, ಉಳ್ತಪಂ-ಉಳ್ದಪಂ.

೩೦೮ ಕೀಳ್- (೧) ನೇಲ್-ಪ್ರೋಲ್-ಸೋಲ್ ಧಾತುಗಳ್ಗೆ ಪರವಾದ ದಕಾರಕ್ಕೆ ವಿಕಲ್ಪವಾಗಿ ತಕಾರಾದೇಶವಪ್ಪುದು.

ಪ್ರಯೋಗಂ ॥ ಕೀಳ್ತಂ-ಕೀಳ್ದಂ, ನೇಲ್ತಪಂ-ನೇಲ್ದಪಂ, ಪ್ರೋಲ್ತಳ್-ಪ್ರೋಲ್ದಳ್, ಸೋಲ್ತುದು- ಸೋಲ್ದುದು.

೩೦೯ ಕಲ್-ಕವಲ್- ಮಡಲ್- ಬಲ್-ಕೂರ್- ಕಸರ್-ಕನರ್-ಕೊನರ್- ಬೆಳರ್-ಆನ್- ಈನ್-ಕೂನ್- ಸೋನ್- ಪೇನ್-ಸೀೞ್- (೨) ಮೊದಲಾದ ಧಾತುಗಳ್ಗೆ ಪರವಾದ ದಕಾರಕ್ಕೆ ತಕಾರಾದೇಶವಪ್ಪುದು.

ಪ್ರಯೋಗಂ ॥ ಕಲ್ತಂ-ಕಲ್ತಪಂ, ಕಲ್ತು, ಇಂತುಳಿದುವು.

---

(೧) ಶ. ಶಾ. ನೇಲ್.

(೨) ಶ. ಶಾ. ಪ್ರೋಲ್- ಸಾಲ್- ಸೋಲ್-ನೂಲ್-ತಳಿರ್- ಬೆಳರ್-ಮೊದಲಾದ ಧಾತುಗಳ್ಗೆ ಪರವಾದ ದಕಾರಕ್ಕೆ ತಕಾರಾದೇಶವಪ್ಪುದು.

೭೩೦ (೧) ಕಾಣ್‌ಧಾತುಗೆ ದಕಾರಾದಿಪ್ರತ್ಯಯಂ ಪರನಾದೊಡೆ ಧಾತುವಿನ ದೀರ್ಘಕ್ಕೆ ಹ್ರಸ್ವಾದೇಶವಪ್ಪುದು.

ಪ್ರಯೋಗಂ ॥ ಕಣ್ದಂ-ಕಣ್ದೊಡೆ, ಕಣ್ದು.

೭೩೧ ಉಳ್‌ಧಾತುಗೆ ಟುಪ್ರತ್ಯಯಮುಂ ಕೊಳ್‌ಧಾತುಗೆ ದಕಾರಾದಿ ಪ್ರತ್ಯಯಮುಂ ಪರನಾದೊಡೆ ಧಾತ್ವಂತವಾದ ಳಕಾರಕ್ಕೆ ಣಕಾರಾದೇಶವಪ್ಪುದು.

ಪ್ರಯೋಗಂ ॥ ಉಣ್ಟು, ಕೊಣ್ದಂ-ಕೊಣ್ಡಪಳ್.

೭೩೨ ಪ್ರತ್ಯಯಕ್ಕೆ ಪೂರ್ವವಾದ ಧಾತ್ವಂತವಾದ ಣಕಾರಕ್ಕೆ ಷಟ್ಪದಿಯಲ್ಲಿ ವಿಕಲ್ಪವಾಗಿ ಅನುಸ್ವಾರಾದೇಶವಪ್ಪುದು.

ಪ್ರಯೋಗಂ॥ ಕೊಂಡಂ, ಕೊಣ್ದಂ, ಉಂಟು, ಉಣ್ಟು.

೭೩೩ ತರ್-ಬರ್-ಕೊಲ್-ಸಲ್ ಧಾತುಗಳ್ಗೆ ದಕಾರಾದಿ ಪ್ರತ್ಯಯಂ ಪರನಾದೊಡೆ ಧಾತ್ವಂತನಾದ ವ್ಯಂಜನಕ್ಕೆ ನಕಾರಾದೇಶವಪ್ಪುದು.

ಪ್ರಯೋಗಂ॥ ತಂದಂ-ಬಂದಂ-ಕೊಂದಂ-ಸಂದಂ-ಸಂದಪಂ.

೭೩೪ ನಿಲ್ ಧಾತುಗೆ ದಕಾರಾದಿ ಪ್ರತ್ಯಯಂ ಪರನಾದೊಡೆ ಧಾತ್ವಂತವಾದ ಲಕಾರಕ್ಕೆ ವಿಕಲ್ಪವಾಗಿ ನಕಾರಾದೇಶವಪ್ಪುದು. ನಕಾರಾದೇಶವಾಗದೆಡೆಯಲ್ಲಿ ಪರವಾದ ದಕಾರಕ್ಕೆ ತಕಾರಾದೇಶವಪ್ಪುದು.

ಪ್ರಯೋಗಂ ॥ ನಿಂದಂ-ನಿಲ್ತಂ-ನಿಂದಪಂ-ನಿಲ್ತಪಂ.

ಆಖ್ಯಾತಪ್ರಕರಣಂ ಮುಗಿದುದು.

---

(೧). ಶ. ಶಾ. ಕೀಳ್–ಏಳ್–ಬೀಳ್-ಆಳ್- ಈ ಧಾತುಗಳ ದೀರ್ಘಕ್ಕೆ ಹ್ರಸ್ವಾದೇಶವಪ್ಪುದು. ಪ್ರ॥ ಕಿಳ್ತಂ-ಎಳ್ದಂ-ಬಿಳ್ದಂ-ಅಳ್ದಂ.

## ಅವ್ಯಯಪ್ರಕರಣಂ.

೪೩೬ ಅವ್ಯಯಲಿಂಗವು ಲಿಂಗವಿಭಕ್ತಿ ವಚನಂಗಳಲ್ಲಿ ವ್ಯತ್ಯಾಸಮಂ ಪೊಂದದೆ ಇರ್ದಂತೆ ಇರ್ಪುದು.

೪೩೭ ಅಲ್ಲಂ-ಇಲ್ಲಂ-ಆದಂ-ಆಣಂ-ಅಣಂ-ಸೀಡುಂ-ಬಳಿಕಂ-ಅಂಉಂ-ಉಸಿಕಂ-ತೇನತೇನಂ- ಮೊದಲಾದುವು ಅವ್ಯಯಂಗಳೆನಿಪ್ಪುವು

೪೩೮ ಗಡ-ಗಳ-ಅಲ್ತು-ಅಲ್ಲ-ಇಲ್ಲ-ಅಲ್ಲದೆ-ಇಲ್ಲದೆ-ಪೊಳ್ತಡ-ತಡಬಡ-ಅಕ್ಕಟ-ಅಕಟ-ಆಗಡ-ಈಗಡ-ಅಹಹ-ಮೊದಲಾದುವು ಅವ್ಯಯಂಗಳೆನಿಪ್ಪುವು. (ಸೂ. ೩೧)

೪೩೯ ಬೋಂಕನೆ- ಚಟಚಟಮೊದಲಾದ ಅನುಕರಣಶಬ್ದಂಗಳುಂ ಅವ್ಯಯಂಗಳೆನಿಪ್ಪುವು. (ಸೂ. ೨೯.)

೪೪೦ (೧) ಪ್ರಯೋಜನಾರ್ಥದಲ್ಲಿಯುಂ ವರ್ತಮಾನ ಭವಿಷ್ಯತ್‌ಕಾಲಂಗಳಲ್ಲಿಯುಂ ಧಾತುಗಳ್ಗೆ "ಅಲ್" ಎಂಬ ಪ್ರತ್ಯಯಮಪ್ಪುದು.

ಪ್ರಯೋಗಂ ॥ ಓದಲ್ ಬಂದಂ, ಉಣಲ್ ಕುಳಿತಂ, ಪಾಲ್ಗರೆಯಲ್ ಬಂದಂ, ಪಾಡಲ್ ಕೇಳ್ದಂ, ಓದೆಬಂದಂ, ಪಾಡೆಕುಳಿತಂ.

೪೪೧ ಅಲ್‌ಪ್ರತ್ಯಯಕ್ಕೆ ಪರವಾಗಿ ಒಡಂ-ಒಡನೆ-ಕೆ ಎಂಬ ಆಗಮಂಗಳ್ ವಿಕಲ್ಪದಿಂದಪ್ಪುವು.

ಪ್ರಯೋಗಂ ॥ (೨) ಪಾಡಲೊಡಂಬಂದಂ, ಪಾಡಲೊಡನೆ ಬಂದಂ ಪಾಡಲ್ಕೆಬಂದಂ, ಪಾಡಲ್ ಬಂದಂ.

೪೪೨ ಪ್ರತಿಷೇಧವಿಷಯದಲ್ಲಿ ಧಾತುಗಳ್ಗೆ "ಅದೆ" ಪ್ರತ್ಯಯ

---

(೧) ಶು ಶಾ. ಅಹಾರ್ಥದಲ್ಲಿ "ಅಲ್" ಪ್ರತ್ಯಯಮಪ್ಪುದು. ಪ್ರ ॥ ಮಾಡಲ್ ದಕ್ಷಂ.

(೨) ಶು ಮ. ವರ್ತಮಾನಾರ್ಥದಲ್ಲಿ "ಅಲೊಡಂ" ಎಂಬ ಪ್ರತ್ಯಯಮಪ್ಪುದು.

ವಪ್ಪುದು. ಪ್ರಯೋಗಂ ||ಕಾಯದೆ, ಪಿಡಿಯದೆ, ಕೊಲ್ಲದೆ, ಕೊಳ್ಳದೆ.

೪೪೩ ಇರ್‌ಧಾತುಗಂ ಪರವಾದ ಅದೆಪ್ರತ್ಯಯಕ್ಕಂ ನಡುವೆ ವಿಕಲ್ಪವಾಗಿ ಅಕಾರಾಗಮವಪ್ಪುದು.

ಪ್ರಯೋಗಂ || ಇರ್ + ಅದೆ= ಇರದೆ, ಇರ ಅದೆ. (ಸೂ. ೩.೦)

೪೪೪ ಗುರ್ವ್ವಾದಿಯಾದ ಧಾತುವಿನ ಮೇಣ್‌ಬಹುಸ್ವರವುಳ್ಳ ಧಾತುವಿನ ಕಡೆಯ ಉಕಾರಕ್ಕೆ ಪೂರ್ವಕಾಲಾರ್ಥದಲ್ಲಿ ಇಕಾರಾದೇಶವಪ್ಪುದು. ಪ್ರಯೋಗಂ || ಮಾಡಿ, ಬೇಡಿ, ಕಲಂಕಿ, ಹರಡಿ,

೪೪೫ ವರ್ತಮಾನಕಾಲದಲ್ಲಿ ಧಾತುಗಳ್ಗೆ ಪರವಾಗಿ ಉತುಂ-ಉತ್ತುಂ-ಉತೆ-ಉತ್ತೆ ಎಂಬ ಪ್ರತ್ಯಯಂಗಳಪ್ಪುವು.

ಪ್ರಯೋಗಂ || ಪೇಳುತುಂ, ಪೇಳುತ್ತುಂ, ಕಳುತೆ, ಕಳುತ್ತೆ,

೪೪೬ (ಗುರ್ವ್ವಾದಿಯಾದ ಮೇಣ್ ಬಹು ಸ್ವರವುಳ್ಳ ಉಕಾರಾಂತವಾದ ಧಾತುಗಳಲ್ಲದೆ ) ಉಳಿದ ಧಾತುಗಳ್ಗೆ ಪೂರ್ವಕಾಲಾರ್ಥದಲ್ಲಿ "ದು" ಪ್ರತ್ಯಯವಪ್ಪುದು.

ಪ್ರಯೋಗಂ|| ಕಾದು, ಪಿಡಿದು, ಇತ್ತು, ಕೊಟ್ಟು, ಎಚ್ಚು, ಕಂಡು, ಕೇಳ್ದು.

೪೪೭ ಭೂತಕಾಲದಲ್ಲಿ ಧಾತುಗಳ್ಗೆ ಪರವಾಗಿ ಪಕ್ಷಾರ್ಥದಲ್ಲಿ "ದೊಡೆ" ಪ್ರತ್ಯಯವಪ್ಪುದು *

ಪ್ರಯೋಗಂ|| ನುಡಿದೊಡೆ. ಪೊಡಿದೊಡೆ. ಕಣ್ದೊಡೆ. ಕೇಳ್ದೊಡೆ.

೪೪೮ ಭವಿಷ್ಯತ್ಕಾಲದಲ್ಲಿ ಧಾತುಗಳ್ಗೆ ಪಕ್ಷಾರ್ಥದಲ್ಲಿ "ವೊಡೆ" ಪ್ರತ್ಯಯವಪ್ಪುದು. *

ಪ್ರಯೋಗಂ|| ನುಡಿವೊಡೆ, ಮಾಡುವೊಡೆ, ಕಾಣ್ಬೊಡೆ, ಕೇಳ್ವೊಡೆ.

---

* ಷಟ್ಪದಿಯಲ್ಲಿ ದೊಡೆ ಪ್ರತ್ಯಯಕ್ಕೆ ದರೆ ಎಂದುಂ ; ವೊಡೆ ಪ್ರತ್ಯಯಕ್ಕೆ ವರೆ ಎಂದುಂ ವಿಕಲ್ಪವಾಗಿ ಅಪ್ಪುವು. ಪ್ರ || ಆದೊಡೆ-ಆದರೆ-ನುಡಿವೊಡೆ-ನುಡಿವರೆ.

೪೪೯ ಧಾತುಗಳ್ಗೆ ವುದುಂ ವನ್ನೆಗಂ—ವನ್ನಂ-ವಿನಂ—ವಿನೆಗಂ ಈ ಪ್ರತ್ಯಯಂಗಳಪ್ಪುವು. ಪ್ರಯೋಗಂ॥ ಪೊಗಳ್ವುದುಂ-(ಬಂದಂ)-ಉಡುವನ್ನೆಗಂ-ಕುಡುವನ್ನಂ-ಬರ್ಪಿನಂ-ಪಾಡುವಿನೆಗಂ.

೪೫೦ (ಸೂ. ೧೯೫, ೨೧೨, ೨೨೧, ೨೨೨, ೨೨೩) ಮೆ ಎವರಂ ಎವರೆಗಂ ತು ತುಟು ತೆ ಪ್ರೊಲ್ ಪ್ರೋಲ್ ಬೊಲ್ ಬೋಲ್ ಒಲ್ ಓಲ್ ಈ ಪ್ರತ್ಯಯಾಂತ ಶಬ್ದಂಗಳ್ ಅವ್ಯಯಂಗಳೆನಿಪ್ಪುವು. ಪ್ರಯೋಗಂ॥ ನೂರ್ಮೆ-ಪಲರ್ಮೆ-ಅನ್ನೆವರಂ-ಅನ್ನೆವರೆಗಂ-ಇನ್ನೆವರಂ ಇನ್ನೆವರೆಗಂ-ಅಂತು-ಅಂತುಟು-ಅಂತೆ-ಇಂತು-ಉಂತೆ-ಎಂತುಟು.

೪೫೧ ಅ, ಆ, ಅಃ, ಆಃ, ಉಃ, ಊಃ, ಉ, ಊ, ಎ, ಏ, ಎಡೆ, ಎಲೆ, ಎಲೇ, ಎಲವೊ, ಎಲವೋ, ಎಮ, ಅಲ್ತೊ, ತೆ, ಅದೆ, ಅರವೊ, ಅಹೋ, ಅಹೊ, ಚೀಃ, ಚೀ, ಛೀಃ, ಅಕ್ಕಟ, ಹೋ, ಹೋಹೋ, ಒ, ಔ, ಮೊದಲಾದುವು ಅವ್ಯಯಸಂಜ್ಞೆಯಂ, ನಿಪಾತಸಂಜ್ಞೆಯುಮಂ ಪಡೆವುವು. (ಸೂ ೨೫)

೪೫೨ ಅವ್ಯಯಕ್ಕೆ ಪರವಾದ ವಿಭಕ್ತಿಪ್ರತ್ಯಯಕ್ಕೆ ಲೋಪವಪ್ಪುದು.

---

## ದ್ವಿರುಕ್ತ್ಯಾದಿಪ್ರಕರಣಂ.

೪೫೩ ೧ ಪರಿಮಿತಿ (ಪರಿಮಾಣ) ಯಲ್ಲಿಯುಂ, ೨ ತಾರತಮ್ಯ (ಹೆಚ್ಚುಕಡಮೆ) ದಲ್ಲಿಯುಂ, ೩ ಆಧಿಕ್ಯದಲ್ಲಿಯುಂ, ೪ ಅಂಗೀಕಾರ (ಒಡಂಬಡುವುದು) ದಲ್ಲಿಯುಂ, ೫ ತ್ವರೆ (ಜಾಗರೂಕತೆ) ಯಲ್ಲಿಯುಂ, ೬ ಆಜ್ಞೆಯಲ್ಲಿಯುಂ, ೭ ಪ್ರಾರ್ಥನೆಯಲ್ಲಿಯುಂ, ೮ ಅನುಕರಣದಲ್ಲಿಯುಂ, ೯ ಸಾಮೀಪ್ಯದಲ್ಲಿಯುಂ ೧೦ ಭೀತಿಯಲ್ಲಿಯುಂ, ೧೧ ಆಶ್ಚರ್ಯದಲ್ಲಿಯುಂ, ೧೨ ಸಂತೋಷದಲ್ಲಿಯುಂ,

೧೩ ಸಂಬೋಧನೆಯಲ್ಲಿಯುಂ * ದ್ವಿರುಕ್ತಿಯಪ್ಪುದು.

ಪ್ರಯೋಗಂ॥ ೧ ಬಾಲರ್ಗೆ ಪಣ್ಣಂಪಣ್ಣಂ ಕುಡು, ಪಂಡಿತರ್ಗೆ ಪೊನ್ನಂ ಪೊನ್ನಂಕುಡು, ೨ ದೊಡ್ಡದೊಡ್ಡವರ್, ಕಿರಿಕಿರಿಯರ್, ೩ ಮನೆಮನೆಯೊಳ್, ಬೀದಿವೀದಿಯೊಳ್, ೪ ಉಂಟುಂಟು, ಮಾಳ್ಕೆಮಾಳ್ಕೆ, ೫-೬ ಮಾಡುಮಾಡು, ನುಡಿನುಡಿ, ೭ ಪಿತನೇ ಪಾಲಿಸು, ಪಾಲಿಸು, ದೇವಾ ಮಣಿವೆಂ ಮಣಿವೆಂ, ೮ ಚಟಚಟನೆ, ಬುಳುಬುಳು ಎನುತ್ತ, ೯ ಮುಂದೆ ಮುಂದೆ, ಕೆಳಕೆಳಗೆ, ೧೦ ಪುಲಿಪುಲಿ, ಕಲ್‌ಕಲ್, ೧೧ ಅಚ್ಚರಿಯರಚ್ಚರಿಯರ್, ತೊಳಪಸಂಪಗೆ ಸಂಪಗೆ, ೧೨ ತಾತಾ ಬಾರಬಾರ, ೧೩ ಮಗನೆ ಮಗನೆ, ಗುರುಗಳೆ ಗುರುಗಳೆ.

೫೫೪ ೧ ಸಮಾಹಾರ, ೨ ದ್ವಿಗು, ೩ ದ್ವಂದ್ವಸಮಾಸಂಗಳಲ್ಲಿ ಅಂತ್ಯಪದಕ್ಕೆ ವಿಕಲ್ಪವಾಗಿ ಏಕವಚನವಪ್ಪುದು.

ಪ್ರಯೋಗಂ॥ ೧ ಮೂರುಲೋಕಂಗಳ ಸಮಾಹಾರಂ-ಮೂಲೋಕಂ, ಮೂಲೋಕಂಗಳ್, ೨ ಈರ್ಪೈದಲೆ-ಈರ್ಪೈದಲೆಗಳ್, ೩ ಕೆರೆ ತೊರೆ-ಕೆರೆತೊರೆಗಳ್.

೪೫೫ ಜಾತಿವಾಚಕ ಶಬ್ದಕ್ಕೆ ವಿಕಲ್ಪವಾಗಿ ಏಕವಚನವಪ್ಪುದು.

ಪ್ರಯೋಗಂ॥ ಗೋದುವೆ ಬೆಳೆದುದು-ಗೋದುವೆಗಳ್ ಬೆಳೆದುವು, ಕಳವೆಮುಗ್ಗಿತ್ತು, ಕಳವೆಗಳ್ ಮುಗ್ಗಿದುವು.

೪೫೬ ೧ ಸಂಖ್ಯೇಯ ಶಬ್ದಕ್ಕ್ಕಂ, ೨ ಸಂಖ್ಯಾ ಶಬ್ದಕ್ಕ್ಕಂ, ೩ ಭಾವವಚನಕ್ಕ್ಕಂ ವಿಕಲ್ಪವಾಗಿ ಏಕವಚನವಪ್ಪುದು.

ಪ್ರಯೋಗಂ॥ ಈರೈದುದೆಸೆ, ಈರೈದುದೆಸೆಗಳ್, ಈರೇಳುಲೋಕಂ, ಈರೇಳುಲೋಕಂಗಳ್. ೨ ಮೂಱುನಾಲ್ಕು, ಮೂರುಗಳ್‌ನಾಲ್ಕು, ನಾಲ್ಕುಆಱು-ನಾಲ್ಕುಗಳಾಱು ೩ ಕುರುಳ್ಗಳ ಕಪ್ಪು. ಕುರುಳ್ಗಳ ಕಪ್ಪುಗಳ್. ಕಡೆಗಣ್ಗಳ ಬೆಳ್ಪು. ಕಡೆಗಣ್ಗಳ ಬೆಳ್ಪುಗಳ್.

---

* ದ್ವಿರುಕ್ತಿ ಎಂದೊಡೆ ಎರಡುವೇಳೆ ಹೇಳುವುದು.

೪೫೭ ವಿಧೇಯ ವಾಚಕಶಬ್ದಕ್ಕೆ ವಿಕಲ್ಪವಾಗಿ ಏಕವಚನ ವಪ್ಪುದು.

ಪ್ರಯೋಗಂ॥ ಪಳೆಮಾತುಗಳ್ ನಂಬಲ್‌ತಕ್ಕುದು, ನಂಬಲ್‌ತಕ್ಕುವು. ಐಶ್ವರ್ಯಂಗಳಧ್ರುವಂ-ಅಧ್ರುವಂಗಳ್.

೪೫೮ ಗುರುವಾಚಕ ಶಬ್ದಕ್ಕಂ-ಆತ್ಮವಾಚಕ ಶಬ್ದಕ್ಕಂ ವಿಕಲ್ಪವಾಗಿ ಬಹುವಚನ ವಪ್ಪುದು.

ಪ್ರಯೋಗಂ॥ ಎಮ್ಮ ತಂದೆಗಳ್– ಎಮ್ಮ ತಂದೆ. ಎಮ್ಮ ದೊರೆಗಳ್–ಎಮ್ಮದೊರೆ. ಎನ್ನಮನೆ, ಎಮ್ಮಮನೆ.

೪೫೯ ಅಸಹ್ಯದಲ್ಲಿಯುಂ—ಪರಿಹಾಸದಲ್ಲಿಯುಂ ವಿಕಲ್ಪವಾಗಿ ಬಹುವಚನ ವಪ್ಪುದು.

ಪ್ರಯೋಗಂ॥ ಅಸಹ್ಯಕ್ಕೆ॥ ಬನ್ನಿಂದುರ್ಯೋಧನರೇ—ಬಾರೈ ದುರ್ಯೋಧನನೆ—ಪರಿಹಾಸಕ್ಕೆ॥ ಬಡವಾದಿರರಸ- ಬಡವಾದಯರಸ.

೪೬೦ ಜಾತಿ ವಾಚಕಶಬ್ದಂ ಏಕವಚನವಾಗಿರ್ದೊಡಂ ಕ್ರಿಯಾಪದಂ ವಿಕಲ್ಪವಾಗಿ ಬಹುವಚನಮಪ್ಪುದು.

ಪ್ರಯೋಗಂ॥ ಕುದುರೆ ಕುಣಿದುದು- ಕುದುರೆ ಕುಣಿದುವು. ಆನೆತುಳಿದುದು ಆನೆತುಳಿದುವು.

೪೬೧ ವಿಶೇಷಣ ಪದಂಗಳ್ಗೆ ಪ್ರಥಮಮಧ್ಯಮೋತ್ತಮ ಪುರುಷ ಪ್ರತ್ಯಯಂಗಳ್ ವಿಕಲ್ಪವಾಗಿ ಅಪ್ಪುವು.

ಪ್ರಯೋಗಂ॥ ಅವಂಜಾಣಂ, ಅವರ್ ಜಾಣರ್. ನೀಂ ಶೂರನೆಯ್. ನೀಂಗಳ್ ಶೂರರಿರ್ ಆಂ ಹುಡುಗನೆಂ. ಆಂಗಳ್ ಹುಡುಗರೆವು *

೪೬೨ ೧ ಕರ್ತ್ರರ್ಥಪ್ರಯೋಗದಲ್ಲಿ ಎನ್-ನನ್ ಶಬ್ದಂಗಳ್ಗೆ ಕರ್ತೃತ್ವಮುಂಟಾದೊಡೆ ಉತ್ತಮಪುರುಷಮುಂ ನಿನ್ ಶಬ್ದಕ್ಕೆ ಕರ್ತೃತ್ವ ಮುಂಟಾದೊಡೆ ಮಧ್ಯಮ ಪುರುಷಮುಂ—೨ ಕರ್ಮಾ

---

* ಶ, ಶಾ. ಆಂಪಂಡಿತರೆವ್—ಆಂಪಂಡಿತನೆಮ್.

ರ್ಥ ಪ್ರಯೋಗದಲ್ಲಿ ಎನ್‌–ನನ್‌ ಶಬ್ದಂಗಳ್ಗೆ ಕರ್ತೃತ್ವ ಮುಂ
ದೊಡೆ ಉತ್ತಮ ಪುರುಷಮುಂ ನಿನ್‌ ಶಬ್ದಕ್ಕೆ ಕರ್ತೃತ್ವ ವ
ಟಾದೊಡೆ ಮಧ್ಯಮ ಪುರುಷಮುಂ ಅಪ್ಪುವು.

ಪ್ರಯೋಗಂ॥

೧ ಉತ್ತಮಪುರುಷಕ್ಕೆ—ಆಂ ಮಾಡಿದೆಂ. ನಾಂಗಳ್‌ ಮಾಡಿದೆವು.
ಮಧ್ಯಮ ,, ನೀಂಮಾಡಿದಯ್‌ ನೀಂಗಳ್‌ ಮಾಡಿದಿರ್‌.
೨ ಉತ್ತಮ ,, ಆಂ ಪೇಳಲ್ಪಟ್ಟೆಂ, ಆಂಗಳ್‌ ಪೇಳಲ್ಪಟ್ಟೆವು
ಮಧ್ಯಮ ,, ನೀಂ ಶಿಕ್ಷಿಸಲ್ಪಟ್ಟೆಲೆ, ನೀಂಗಳ್‌ ಕರೆಯಿಸಲ್ಪಟ್

೨೬೩ ಉಳಿದೆಡೆಗಳಲ್ಲಿ ಪ್ರಥಮಪುರುಷ ವಪ್ಪುದು.

ಪ್ರಯೋಗಂ॥ ಅವಂ ಮಾಡಿದಂ. ಸಾರದೆಯೊಲಿದಳ್‌, ಅವರ್‌
ಡಿದರ್‌, ಅದು ತರಲ್ಪಟ್ಟುದು. ಅವು ತರಲ್ಪಟ್ಟುವು.

೨೬೪ ವಿಶೇಷಣ ಪದಂಗಳಾದ, ಮೇಣ್‌, ಅಕಾರಾಂತವ
ಕೃದಂತ, ಸಂಖ್ಯೇಯ, ಸಂಖ್ಯಾ ಪ್ರಶ್ನಾರ್ಥಕ ಸರ್ವನಾಮ, ಗ
ವಾಚಕ ಶಬ್ದಂಗಳ್ಗೆ ಪರವಾದ ವಿಭಕ್ತಿ ಪ್ರತ್ಯಯಂಗಳ್ಗೆ
ಲ್ಪವಾಗಿ ಲೋಪವಪ್ಪುದು.

ಪ್ರಯೋಗಂ॥ ಸಂದ, ಗಂಗೆ–ಪೊಡೆವ, ಭೇರಿ–ಆಲಿಸೆಯ,
ಡವ–ಎಣ್ಬಸೆಯ, ಕುಲಾಚಲಂ-ಪದಿನಾಸಾಸಿರ, ಪೆಂಡಿರ್‌-ಸಾಸಿರ,
ರಿಗಳ್‌-ಆವ, ಬವಣಿ–ಅವ, ದೇವಂ-ಸಣ್ಣ ಮನೆ-ದೊಡ್ಡ, ಬೆಟ್ಟುಗಳ್‌

೨೬೫ ಸಮುಚ್ಚಯದಲ್ಲಿ ಪದಕ್ಕೆ ಪರನಾಗಿ ಉಮ್‌
ಅವ್ಯಯ ವಪ್ಪುದು. ಆ ದೊಡೆ ಷಷ್ಠೀವಿಭಕ್ತ್ಯಂತನ
ಪದಕ್ಕೆ ಬಾರದು.

ಪ್ರಯೋಗಂ॥ ಹರಿಯುಮ್‌–ಹರಿಯಿಂದುಂ-ಹರಿಗುಮ್‌-ಹ
ತ್ತಣಿಂದುಂ–ಹರಿಯಲ್ಲಿಯುಂ. (ಷಟ್ಪದಿಗಳಲ್ಲಿ ಉಂ, ಊ, ಎಂದು

೨೬೬ ಪ್ರಕೃತಿಗಂ–ಅಮ್‌ ಪ್ರತ್ಯಯಕ್ಕಂ ನಡುವೆ
ಎಂಬ ಅವ್ಯಯವಪ್ಪುದು.

ಪ್ರಯೋಗಂ॥ ಹರಿಯುಮಂ, ಹರನುಮಂ, ಕಣ್ಣಮಂ.

೪೬೭ ಚತುರ್ಥೀ ವಿಭಕ್ತಿಪ್ರತ್ಯಯಾಂತವಾದ ಪದಕ್ಕಂ ಒಳ್ಯಾಂತ ಪದಕ್ಕಂ ಪರವಾಗಿ ವಿಕಲ್ಪವಾಗಿ ಅಂ ಎಂಬ ಅವ್ಯಯವಪ್ಪುದು.

ಪ್ರಯೋಗಂ ॥ ಪದ್ಮಜನಿಗಂ—ಪದ್ಮಜನಿಗುಂ, ತಾಯೊಳಂ—ತಾಯೊಳುಂ.

೪೬೮ ವಿಶೇಷಣ ವಿಶೇಷ್ಯಪದಂಗಳು ಸಮಾನಲಿಂಗ, ವಿಭಕ್ತಿ, ವಚನಾಂತಂಗಳಾಗಿರಬೇಕು. ಆದೊಡೆ ವಿಶೇಷಣಪದವು ಪ್ರಥಮೈಕವಚನಾಂತವಾಗಿರ್ದೊಡಂ ದೋಷವಿಲ್ಲ.

ಪ್ರಯೋಗಂ ॥ ಅತ್ಯಂತ ನೃಶಂಸನಂ, ಕಂಸನಂ. ಅತಿಸುಭಗೆ ಸರಸ್ವತಿಗೆ. ವೀರಂ ಕೈದುವೊತ್ತರದೇವಂಗೆ.

೪೬೯ ದ್ವಂದ್ವಸಮಾಸದಲ್ಲಿ ಸೇರಲ್ತಕ್ಕ ಪದಂಗಳು ಪ್ರಥಮೈಕವಚನಾಂತವಾಗಿರ್ದೊಡಂ ಅಂತ್ಯಪದದ ವಿಭಕ್ತ್ಯರ್ಥಮಂ ಕೂಡುವುದು ಪ್ರಯೋಗಂ॥ ಸಿರಿಯರಸಂ, ಮಾದೇವಂ, ಸರಸತಿಯೆರೆಯರ್ಕಳ್—ಇಲ್ಲಿ ಸಿರಿಯರಸನ, ಮಾದೇವನ, ಸರಸತಿಯೆರೆಯನ ಎಂದರಿವುದು.

೪೭೦ ವಿಶೇಷ್ಯ ವಿಶೇಷಣಪದಂಗಳ್ಗೆ ಲಿಂಗಭೇದವಿರ್ದೊಡಂ ನಿಯತಲಿಂಗವಾದೊಡೆ ದೋಷವಿಲ್ಲ.

ಪ್ರಯೋಗಂ॥ ಆತಂ ಜಗದ್ದರ್ಪಣಂ, ಆಕೆ ಜಗದ್ದರ್ಪಣಂ.

೪೭೧ ಅಂತಪ್ಪ-ಇಂತಪ್ಪ-ಉಂತಪ್ಪ-ಎಂತಪ್ಪ ಈ ಶಬ್ದಂಗಳ್ಗೆ ಕ್ರಮದಿಂ ಅನ್ನ-ಇನ್ನ-ಉನ್ನ-ಎನ್ನ-ಎಂಬಾದೇಶಂಗಳಪ್ಪುವು.

೪೭೨ ಆದ್ಯಕ್ಷರವಲ್ಲದ ಯಕಾರ-ವಕಾರಂಗಳ್ಗೆ ಕ್ರಮವಾಗಿ ಐಕಾರವುಂ ಔಕಾರವುಂ ಆದೇಶಂಗಳಾಗಿ ಬಹುಳವಾಗಿ ಅಪ್ಪುವು.

ಪ್ರಯೋಗಂ॥ ಕೈಗಳ್-ಕಯ್ಗಳ್. ಮೆಯ್ಗಲಿ-ಮೈಯ್ಗಲಿ. ಮಾಡಿದಯ್-ಮಾಡಿದೈ. ಕೌಂಕಳ್-ಕವುಂಕಳ್. ಕೌಂಗು-ಕವುಂಗು.

೪೭೩ ಹ್ರಸ್ವಸ್ವರದಿಂ ಕೂಡಿದ ವ್ಯಂಜನಕ್ಕೆಪರವಾದ ರೇಫ ಸಂಯುಕ್ತವಾದ ಪಕಾರಕ್ಕೆ ವಿಕಲ್ಪವಾಗಿ "ಹ" ಕಾರಾದೇಶವಪ್ಪುದು. ಪ್ರಯೋಗಂ॥ ತರ್ಪಂ-ತಹಂ-ಬರ್ಪಂ-ಬಹಂ.

೪೭೪ ಪಕಾರಕ್ಕಂ ಹಕಾರಕ್ಕಂ ಪ್ರಾಯಿಕವಾಗಿ ಭೇದವಿಲ್ಲ. ಪ್ರಯೋಗಂ॥ ಪಾಲ್-ಹಾಲ್. ಪಗಲ್-ಹಗಲ್. ಪಣ್-ಹಣ್.

ಕಂದಂ ॥ ಸಿರಿಸರಸತಿಯರ ಕೃಪೆಯಿಂ । ಮೆರೆವ ಮಹಾರಾಜಕೃಷ್ಣ
ರಾಜಂಗೆಂದುಂ ॥ ಸಿರಿಯರಸಂ ದಯೆದೋರುತೆ । ಪೊರೆಗೆ
ಸುಖಾರೋಗ್ಯಭಾಗ್ಯಪೂರ್ಣಾಯುಗಳಿಂ ॥

ಕರ್ಣಾಟಪಂಡಿತೋತ್ತಮ । ಕರ್ಣಾಟನವಾಕ್ಸುಧಾಬ್ಧಿ
ಕೃಷ್ಣಾರ್ಯನ ಸ॥ ತ್ಕರ್ಣಾಟಶಬ್ದಶಾಸ್ತ್ರಂ । ಪೂರ್ಣ
ಪ್ರಜ್ಞೇಶನಂಘ್ರಿಕೃಪೆಯಿಂ ಮೆರೆಗೆ ॥

ಸ್ವಸ್ತಿ ಪ್ರಜೆಗಳ್ಗಕ್ಕೆಮ । ಶಸ್ತಂ ಗೋಬ್ರಾಹ್ಮಣರ್ಗಮಕ್ಕೆ
ಮಹಜನರ್॥ ವಿಸ್ತರಿಸುತೆ ಧರ್ಮಂಗಳ । ನಿಸ್ತುಲಕೀರ್ತಿ
ಪ್ರಕಾಶದಿಂ ಮೆರೆಗೆಂದುಂ ॥

ಇಂತು ಸಕಲ ವಿಬುಧಸಂರಕ್ಷಣವಿಚಕ್ಷಣ ನಾರಾಯಣಚರಣಾರವಿಂದ ಮಕರಂದ
ಸಂದೋಹೇಂದಿಂದಿರೀಕಾಯಮಾನ ಶ್ರೀಮದ್ಧರಿತಸ ಕುಲ
ತಿಲಕ ಶ್ರೀಜಾನಕೀವೇಂಕಟರಮಣಾಚಾರ್ಯವರ್ಯ
ತನೂಜ ಸುಕವಿ ಕೃಷ್ಣಾಚಾರ್ಯ
ವಿರಚಿತಮಪ್ಪ ಕರ್ಣಾಟವ್ಯಾಕರಣಂ ಸಂಪೂರ್ಣಂ.

॥ ಶ್ರೀಕೃಷ್ಣಾರ್ಪಣಮಸ್ತು ॥